# ರತಿದೇವಿ

ಮತ್ತು

## ಇತರ ಕಥೆಗಳು



ಎಂ. ವಿ. ಸೀತಾರಾಮಯ್ಯ

# ಹಕ್ಕಿ ಹಾಡು

## ರಾಘವ ರಚಿತ

"......Went through it (the book) poem after poem. They are all so sweet and so interesting that I could not close the book until I had reached its last page. Some of the poems took me back to my childhood and school-boy days.—We too read ciphers and numerals in the figures on the back of butterflies (ಹಳದಿಯ ಸೊನ್ನೆ on p. 13); we too saw the paper boat in the crescent moon (p 39); if to you the crescent moon and the star on it were ತುಟಿ and ಬುಲಾಕು (p. 38), it was the eyelid and the tear of joy on it to me, and so forth. So I was delighted to peep once again into the lost world of my childhood through your poems. Your such beautiful lines as ಹರುಷವೆ ಹೂವಾಯಿತ್ತು (p 35), those of ನರೆಯ ಮನೆಯಂಗಳದ ಮಲ್ಲಿಕಾ ಕುಸುಮ (p 21), the last verse of ತಿರುಕನ ಜೋಳಿ (p. 63) and the poems ಕವಳ ರಾಯಿ (pp. 65-66), ಬಡವನ ಕೊರಳಿ, ತಾರೆಗಳ ಮಾತುಮಾತು, etc., bespeak the genuine poet in you I congratulate you again and again."
*—Mr. M. Govinda Pai*

"ಒಟ್ಟಿನಲ್ಲಿ ಇದು ಒಳ್ಳೆಯ ಕೃತಿ. ಕನ್ನಡಕ್ಕೆ ಇಂಥ ಕವಿತೆ ಬೇಕು."
—ಶ್ರೀ. ಮಾ. ವೆಂ. ಅ.

"....ರಾಘವರ ಹೃದಯದಲ್ಲಿ ಜನ್ಮ ತಾಳಿ, ಮಂಜುಳವಾದ ಸ್ವರತಾಳಮೇಳದಲ್ಲಿ ಮೈಗೊಂಡ ಹಲವಾರು ಭಾವಲಹರಿಗಳನ್ನು ನಾವು ಇಲ್ಲಿ ಕಾಣಬಹುದು. ಸ್ವಭಾವ ಸುಂದರಿಯ ಆವರಣದಲ್ಲಿ ಕಳೆ ಕಟ್ಟಿದ....ಕೆಲವು ಕುಸುಮಗಳನ್ನು ಕಂಡು ತನ್ಮಯಿಯು ಹಾಡಿರುವನಲ್ಲದೆ,....ಜೀವನದ ದುರಂತ ದೃಶ್ಯಗಳನ್ನು ಅನುಭವಿಸಿ ಆರ್ತನಾದದಿಂದ ಕೂಗಿಕೊಂಡಿರುವನು. ...ಅನುಬಂಧದಲ್ಲಿ ಕೆಲವು ಗೀತಗಳಿಗೆ ರಾಗ, ತಾಳ, ಸ್ವರ ಪ್ರಸ್ತಾರ ಕೊಟ್ಟಿದ್ದರಿಂದ ಈ ಸಂಗ್ರಹಕ್ಕೆ ಹೊಸತನವುಂಟಾಗಿದೆ. ಭಾಷೆ ಸುಲಭವಾಗಿದೆ; ಶೈಲಿ ನಿರರ್ಗಳವಾಗಿ ಸಹಜವಾಗಿ ಹರಿದಿದೆ". —ಜಯಕರ್ನಾಟಕ

"ಎಲ್ಲ ಕವಿತೆಗಳಲ್ಲಿಯೂ ಕವಿಯ ದೇಶಾಭಿಮಾನ, ತತ್ತ್ವಜಿಜ್ಞಾಸೆ, ಜೀವನ ಸಮಸ್ಯೆಯ ನಿರೀಕ್ಷಣೆ ಇತ್ಯಾದಿ ವಿಷಯಗಳು ಕಂಗೊಳಿಸುತ್ತಿವೆ.. ..ಕನ್ನಡ ಸಾಹಿತ್ಯ ಪ್ರೇಮಿಗಳೂ ರಸಜ್ಞರೂ ಈ ಗ್ರಂಥವನ್ನು ಅವಶ್ಯವಾಗಿ ಓದಬೇಕೆಂದು ನಾವು ಬಯಸುತ್ತೇವೆ." —ಶರಣ ಸಾಹಿತ್ಯ

"ಶ್ರೀ. ರಾಘವರ ಕಾವ್ಯನಿರ್ಝರಿ, .. ಸಾವಧಾನವಾಗಿ ಹರಿಯುವ ಒಂದು ತರಂಗಿಣಿ. ನಡೆ ಮಂದವಾದರೂ ಕಿವಿಗೊಟ್ಟು ಕೇಳಿದಷ್ಟೂ ಮನಕ್ಕೆ ಇಂಪಾಗಿದೆ."
—ಸಾಹಿತ್ಯ ಪರಿಷತ್ಪತ್ರಿಕೆ

# ರತಿದೇವಿ

ಮತ್ತು

# ಇತರ ಕಥೆಗಳು

ಲೇಖಕ ಮತ್ತು ಪ್ರಕಾಶಕ :

ಎಂ. ವಿ. ಸೀತಾರಾಮಯ್ಯ, ಎಂ.ಎ.

ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು ನಗರ

೧೯೪೫

# ಬಿನ್ನಹ

ಇದರಲ್ಲಿನ 'ಬೋಲೆಸ್ಲೊ' ಎಂಬ ಕಥೆ ರಷ್ಯದ ಪ್ರಸಿದ್ಧ ಸಾಹಿತಿ ಮ್ಯಾಕ್ಸಿಂಗಾರ್ಕಿಯ ಅದೇ ಹೆಸರಿನ ಕಥೆಯ (ಇಂಗ್ಲಿಷ್ ಭಾಷಾಂತರದ) ಭಾಷಾಂತರ. ಇನ್ನುಳಿದವು ಸ್ವತಂತ್ರ ಕಥೆಗಳು. ಇವು ಈ ಮೊದಲೆ 'ವಾಣಿ', 'ಕತೆಗಾರ', 'ವಾಕ್‌ಚಿತ್ರ', 'ಮಯೂರ' ಗ್ರಂಥಮಾಲೆ, 'ಗಾರ್ಕಿ' ಸ್ಮಾರಕ ಗ್ರಂಥ—ಈ ಪತ್ರಿಕೆ ಪ್ರಕಟನೆಗಳಲ್ಲಿ ಪ್ರಕಟವಾಗಿವೆ–ಇವುಗಳ ಸಂಪಾದಕರಿಗೆ ನಾನು ಕೃತಜ್ಞನಾಗಿದ್ದೇನೆ.

ಕಥೆಗಳ ಬಗ್ಗೆ ಏನೂ ಹೇಳಬಯಸುವುದಿಲ್ಲ: ವಾಚಕರ ಮುಂದಿಟ್ಟಿದ್ದೇನೆ; ಅವರು ಓದಿ ನಲಿದರೆ, ಕಥೆ ಬರೆದದ್ದು ಸಾರ್ಥಕ ಎಂದು ನಾನೂ ನಲಿಯುತ್ತೇನೆ.

ಇದರ ಪ್ರಕಾಶನ ಕಾರ್ಯದಲ್ಲಿ ನೆರವಾದ ಸತ್ಯಶೋಧನ ಪ್ರಕಟನ ಮಂದಿರದ ಒಡೆಯರಿಗೂ ಅಚ್ಚುಮಾಡಿಕೊಟ್ಟ ಸುಬೋಧ ಮುದ್ರಣಾಲಯದವರಿಗೂ ವಂದನೆಗಳು.

ಬೆಂಗಳೂರು
೮-೬-೧೯೪೫

ಎಂ. ವಿ. ಸೀತಾರಾಮಯ್ಯ

# ಪರಿವಿಡಿ



---

## ಎಂ. ವಿ. ಸೀತಾರಾಮಯ್ಯನವರ ಕೃತಿಗಳು

*ಶಿಲಾಮುಖ (ಹಾತಾರ್ನಿನ ಕಥೆಗಳ ಅನುವಾದ)
*ಯೌವನಸುಧೆ ( ,, )
ಮಾರ್ಗದರ್ಶಕ (೧೩ ಸ್ವತಂತ್ರ ಸಣ್ಣ ಕಥೆಗಳು)
ರತಿದೇವಿ ಮತ್ತು ಇತರ ಕಥೆಗಳು
ಭಾಗ್ಯಲಕ್ಷ್ಮಿ (ಕಿರು ಕಾದಂಬರಿ)
ಸಾಧನ (ಕಾದಂಬರಿ: ಅಚ್ಚಿನಲ್ಲಿ)
*ಹೂವಿನ ಆಸೆ (ನಾಟಕ)
ತೆರೆಮರೆಯ ಚಿತ್ರಗಳು (ನಾಟಕ)
ಶಶಿಶೇಖರ (ನಾಟಕ: ಅಚ್ಚಿನಲ್ಲಿ)
ಕವಿಯ ಹೆಂಡತಿ (೩ ನಾಟಕಗಳು: ಅಚ್ಚಿನಲ್ಲಿ)
ಹಕ್ಕಿ ಹಾಡು
ಕಾವ್ಯಾಲಾಪ
ರಾಗ (ಪ್ರಣಯ ಗೀತಗಳು: ಅಚ್ಚಿನಲ್ಲಿ)
ಆ ಚಿತ್ರಗಳು (ಕಥನ ಕವನಗಳು: ಅಚ್ಚಿನಲ್ಲಿ)

[*ಈ ಗುರುತಿನ ಗ್ರಂಥ ಪ್ರತಿಗಳು ಮುಗಿದಿವೆ]

# ರತಿದೇವಿ

ಶ್ರೀಕಾಂತ ಸುಪ್ರಸಿದ್ಧನಾದ ತರುಣ ಚಿತ್ರಗಾರ. ಅವನ ಪ್ರಸಿದ್ಧಿಗೆ ಅವನ ಕಲೆಯ ಬೆಡಗೂ ಅವನ ರೂಪಿನ ಬೆಡಗೂ ಎರಡೂ ಕಾರಣವಾಗಿದ್ದುವು. ಇವನಂತೆಯೇ ಸುಪ್ರಸಿದ್ಧರಾದ ತರುಣರಾದ ಚಿತ್ರಗಾರರು ಒಬ್ಬಿಬ್ಬರು ಇದ್ದರು. ಆದರೆ ಅವರು ಶ್ರೀಕಾಂತನಂತೆ ಆಕರ್ಷಕ ವ್ಯಕ್ತಿಗಳಲ್ಲ. ಶ್ರೀಕಾಂತನನ್ನು ನೋಡಿದೊಡನೆಯೆ ಅವನು ಸಂಗೀತಗಾರನೋ ಚಿತ್ರಗಾರನೋ ನಟನೋ ಆಗಿರಬೇಕೆಂದು ಯಾರಿಗಾದರೂ ತಟ್ಟನೆ ಹೊಳೆಯುತ್ತಿತ್ತು. ಅವನ ಮುಖದಲ್ಲಿ ಆ ನಯವಿತ್ತು, ನೋಟದಲ್ಲಿ ಆ ಹೊಳಪಿತ್ತು. ಅವನ ಮುಖದಲ್ಲಿ ಕಾಣುತ್ತಿದ್ದ ಆ ನಯ ಅವನ ನಗೆಯಲ್ಲಿ ಮುಗುಳಾಗಿ, ನುಡಿಯಲ್ಲಿ ತುಳಿ, ನಡತೆಯಲ್ಲಿ ಫಲಿಸುತ್ತಿತ್ತು. ಇಂಥ ಗುಣವಂತ, ಕಲಾವಂತ ವ್ಯಕ್ತಿಯನ್ನು ಕಂಡರೆ ಯಾರಿಗೆ ಮೆಚ್ಚಾಗುವುದಿಲ್ಲ? ಎಲ್ಲರೂ,—ತಮ್ಮ ತಮ್ಮ ಭಾವಚಿತ್ರಗಳನ್ನು ಬರಸಿಟ್ಟುಕೊಳ್ಳಬೇಕೆಂದು ಬಯಸಿದವರೆಲ್ಲರೂ, ಶ್ರೀಕಾಂತನ ಬಳಿಗೇ ಹೋಗುತ್ತಿದ್ದರು. ಅವನ ಬಳಿಗೆ ಹೋಗಿ ಭಾವಚಿತ್ರ ಬರಸಿಕೊಂಡವರೆಲ್ಲರೂ ಭಾವಚಿತ್ರದ ವಿಷಯದಲ್ಲಿ ತೃಪ್ತರಾಗುತ್ತಿದ್ದರು; ಚಿತ್ರಕ್ಕೆ ಅವನು ಕೇಳಿದ ಬೆಲೆ ಕೊಡುತ್ತಿದ್ದರು ಹೀಗೆ, ಕಾಲಕ್ರಮದಲ್ಲಿ ಶ್ರೀಕಾಂತ ಪ್ರಸಿದ್ಧಿಗೆ ಬಂದನು, ಇವನು ಸ್ವಲ್ಪ ಪ್ರಸಿದ್ಧಿಗೆ ಬಂದಮೇಲೆ ಎಷ್ಟೋ ಮಂದಿ ಶ್ರೀಮಂತರು ಹೊರ ಊರುಗಳಿಂದ ಇವನ ಬಳಿಗೆ ಬಂದು ಭಾವಚಿತ್ರಗಳನ್ನು ಬರಸಿಕೊಂಡು ಹೋಗುತ್ತಿದ್ದರು. ಒಬ್ಬಿಬ್ಬರು ಸಂಸ್ಥಾನಾಧೀಶ್ವರರೂ ಸಹ ಶ್ರೀಕಾಂತನನ್ನು ಕರಸಿಕೊಂಡು, ಅವನಿಂದ ಭಾವಚಿತ್ರಗಳನ್ನು ಬರಸಿ, ಅವನನ್ನು ಸನ್ಮಾನಿಸಿ ಪ್ರೋತ್ಸಾಹಿಸಿದ್ದರು.

ಹಣ ಗಳಿಸುವುದು ಕಲೋಪಾಸಕನ ಉದ್ದೇಶವಲ್ಲದಿದ್ದರೂ, ಆಗಿರಕೂಡದಾದರೂ, ಅವನು ಸುಖವಾಗಿ, ಇನ್ನೊಬ್ಬರ ಗುಲಾಮನಾಗಿರದೆ

ಹೊಟ್ಟೆಹೊರೆಯಬೇಕಾದರೆ, ಅವನಿಗೆ ಅವನ ಕಲೆಯಮೂಲಕವೇ ಹಣ ಸಂಪಾದನೆಯಾಗಬೇಕು. ಆಗಲೇ ಕಲೋಪಾಸಕನಿಗೆ ತನ್ನ ಕಲೆಯ ವಿಚಾರದಲ್ಲಿ ಒಂದು ಸಾರ್ಥಕ್ಯಭಾವ ಬಂದು, ಕಲೆಗಾಗಿಯೇ ತನ್ನ ಜೀವನವನ್ನು ಮುಡಿಪಾಗಿಡಬೇಕೆಂಬ ಮನೋಭಾವ ಉಂಟಾಗುವುದು. ಅಲ್ಲದೆ, ಗುಲಾಮಗಿರಿಗೆ ಗುರಿಯಾದ ಚಿತ್ರಕಾರನಿಂದಾಗಲಿ ಸಾಹಿತಿಯಿಂದಾಗಲಿ ಸ್ವಚ್ಛಂದ ಸಂರಂಭಪೂರ್ಣವಾದ, ಕೆಚ್ಚಿನಿಂದ ಕೂಡಿದ, ಕೃತಿರತ್ನವನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಆದರೆ, ಕಲೆಯಿಂದ ಬದುಕಿಹೋಗುವುದು ಹಾಗಿರಲಿ, ನೆಮ್ಮದಿಯ ಬದುಕು ಸಾಗಿಸಿದ ಕಲೆಗಾರರ ಸಂಖ್ಯೆ ಕೂಡ ವಿರಳ. ಎಂದೂ ಕಲಾಸುಂದರಿಯಮೇಲೆ ಲಕ್ಷ್ಮಿಯ ಕಟಾಕ್ಷವಿಲ್ಲ. ಇದಕ್ಕೆ ಮುಖ್ಯ ಕಾರಣ, ಜನತೆಯ ಕಲಾಭಿರುಚಿ ಶೂನ್ಯತೆ, ಅದರ ಪರಿಣಾಮವಾದ ಅವಗಣನೆ. ಆದರೆ ಯಾರ ಮೇಲೋ ಬೀರಿದ ಅವಳ ಕಟಾಕ್ಷವೀಕ್ಷಣದ ಬೆಳಕು ಕಲೆಗಾರರ ಮೇಲೂ ಅಪ್ಪಿತಪ್ಪಿ, ನಿಯಮವನ್ನು ಪುಷ್ಟಿಗೊಳಿಸುವ ಅಪವಾದವಾಗಿ, ಒಮ್ಮೊಮ್ಮೆ ಬಂದು ಬೀಳುವುದುಂಟು. ಹಾಗೆ ಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರನಾದವನು ಶ್ರೀಕಾಂತ.

ಶ್ರೀಕಾಂತ ತನ್ನ ಕಲಾಭ್ಯಾಸವನ್ನು ಪೂರೈಸಿಕೊಂಡು, ಪ್ರಮುಖ ನಗರವಾದ ...ಲ್ಲಿ ಸಣ್ಣ ಕೊಟಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು, ಚಿತ್ರಕೆಲಸವನ್ನು ತನ್ನ ವೃತ್ತಿಯನ್ನಾಗಿ ಮಾಡಿಕೊಂಡ ಅತ್ಯಲ್ಪಕಾಲ ದಲ್ಲಿಯೇ ಜೊತೆಯ ಚಿತ್ರಗಾರರು ಹೊಟ್ಟೆಕಿಚ್ಚುಪಡುವ ಮಟ್ಟಿಗೆ ಅವನಿಗೆ ಹಣಸಂಪಾದನೆಯಾಗತೊಡಗಿತು. ಸಂಪಾದನೆ ಹೊಟ್ಟೆ ಬಟ್ಟೆಗಾಗಿ ಸ್ವಲ್ಪ ಮಿಗುವಂತಾದಮೇಲೆ, ಶ್ರೀಕಾಂತ ಮೊದಲಿನ ಕೊಟಡಿ ಬಿಟ್ಟು ಇನ್ನು ಸ್ವಲ್ಪ ವಿಶಾಲವಾದ ಕೊಟಡಿ ಗೊತ್ತುಮಾಡಿಕೊಂಡನು. ಒಂದೆರಡು ವರ್ಷಗಳಾದಮೇಲೆ, ಅವನು ಹೆಚ್ಚು ಪ್ರಸಿದ್ಧಿಗೆ ಬಂದಮೇಲೆ, ಅವನಲ್ಲಿ ತಕ್ಕಮಟ್ಟಿನ ಹಣ ಕೂಡಿತು. ಆಗ ಅವನು ಸುಂದರವಾದ, ಸಣ್ಣದಾದ ಮನೆಯೊಂದನ್ನು ಕೊಂಡುಕೊಂಡು ಅಲ್ಲಿ ತನ್ನ "ಚಿತ್ರಶಾಲೆ"ಯನ್ನು ತೆರೆದನು.

ಚಿತ್ರಶಾಲೆಯಾಗಿದ್ದ ಅವನ ಮನೆಯ ಮುಂದೆ ಸೊಗಸಾದ ಸಣ್ಣ ಕೈತೋಟವಿತ್ತು. ಮನೆ ಮೇಲುನೋಟಕ್ಕೆ ಸುಂದರವಾಗಿದ್ದರೂ ಅದರ

ರಚನೆ ಸರ್ವಸಾಮಾನ್ಯವಾಗಿತ್ತು. ಮುಂದುಗಡೆ ಎರಡು ಕೋಣೆಗಳು: ಒಂದು ಶ್ರೀಕಾಂತ ಮಲಗುವದು, ಇನ್ನೊಂದು ಬಂದುಹೋಗುವವರನ್ನು ಕಾಣುವುದಕ್ಕಾಗಿ; ಕೋಣೆಗಳಾದಮೇಲೆ ವಿಶಾಲವಾದ ಹಜಾರ; ಹಜಾರದ ಹಿಂದುಗಡೆ ಅಡುಗೆಮನೆ, ಊಟದಮನೆ, ನಡುಮನೆ—ಇಷ್ಟೆ; ಮುಂದಿನ ಎರಡು ಕೋಣೆಗಳ ಮೇಲುಭಾಗದಲ್ಲಿ ಬಿಸಿಲುಮಚ್ಚು, ಹಜಾರದ ಮೇಲ ಭಾಗದಲ್ಲಿ ಮಹಡಿ. ಕೆಳಗಿನ ಹಜಾರದಲ್ಲಿ ಅನೇಕ ಚಿತ್ರಗಳನ್ನು ತೂಗಹಾಕಿ ಅಲಂಕರಿಸಿತ್ತು; ಆ ಚಿತ್ರಗಳ ಪೈಕಿ ಶ್ರೀಕಾಂತ ವಿದ್ಯಾರ್ಥಿದಶೆಯಲ್ಲಿದ್ದಾಗ ಬರೆದ ಹಲವು ಚಿತ್ರಗಳೂ, ಒಬ್ಬಿಬ್ಬರು ಪ್ರಸಿದ್ಧ ಚಿತ್ರಗಾರರ ಶಿಷ್ಯವೃತ್ತಿ ಕೈಕೊಂಡಿದ್ದಾಗ ಬರೆದವುಗಳೂ ಮಾತ್ರ ಇದ್ದುವು. ಮಹಡಿಯೆ ಶ್ರೀಕಾಂತನ ಚಿತ್ರಶಾಲೆ; ಅಲ್ಲಿಯೇ ಅವನು ಚಿತ್ರಗಳನ್ನು ಬರೆಯುತ್ತಿದ್ದುದು. ಈ ಚಿತ್ರಶಾಲೆ ಚಿತ್ರಗಾರನಿಗೆ ಬೇಕಾದ ಸಾಮಗ್ರಿ ಸಲಕರಣೆಗಳಿಂದಲೂ ಸೋಫ ಕುರ್ಚಿಗಳಿಂದಲೂ ಪುಷ್ಪಪಾತ್ರೆಗಳಿಂದಲೂ ಹೂಗಿಡಗಳಿಂದಲೂ ಅಣಿಯಾಗಿ, ಅಲಂಕೃತವಾಗಿ, ಆಹ್ಲಾದಕರವಾಗಿತ್ತು. ಅಲ್ಲಿ ಇದ್ದ ಚಿತ್ರಗಳೆಲ್ಲ ಶ್ರೀಕಾಂತ ಚಿತ್ರಗಾರನಾಗಿ ನೆಲೆನಿಂತಮೇಲೆ ಬರೆದವು. ಈ ಚಿತ್ರಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದಾಗಿತ್ತು: ಒಂದು, ಕೆಲವು ರಮಣಿಯರ ಚಿತ್ರಗಳ ಮಾಲೆ; ಇನ್ನೊಂದು ತಿರುಕರು, ಬೀದಿಯ ವ್ಯಾಪಾರಗಾರರು, ಕೂಲಿಯ ಕೆಲಸಗಾರರು, ಹುಡುಗರು—ಮುಂತಾದ ಈ ಬಗೆಯ ಜನರ ಚಿತ್ರಗಳ ಶ್ರೇಣಿ. ಇವೆಲ್ಲವೂ ಚಿತ್ರಗಾರ ತನಗಾಗಿ, ಅಭ್ಯಾಸಕ್ಕಾಗಿ, ತನ್ನ ಭಾವಚಿತ್ರಕಲಾನೈಪುಣ್ಯವನ್ನು ಬೆಳೆಸಿಕೊಳ್ಳುವುದಕ್ಕಾಗಿ, ಆತ್ಮತೃಪ್ತಿಗಾಗಿ ಬರೆದವು. ರಮಣಿಯರ ಚಿತ್ರಗಳ ವಿಚಾರವಾಗಿ ಜನ ಮನಬಂದಂತೆ ಕತೆ ಹೇಳಿಕೊಳ್ಳುತ್ತಿದ್ದರು. ಎಲ್ಲ ಕತೆಗಳ ಅಂಶವೂ ಇಷ್ಟೆ: ಶ್ರೀಕಾಂತ ಬರುಬರುತ್ತ ಹೆಚ್ಚು ಹಣ ಸಂಪಾದಿಸತೊಡಗಿದ್ದಾನೆ, ಹಣವಿದೆ; ಯೌವನವಂತ, ರೂಪವಂತ, ಕಲೆಗಾರ, ರಸಿಕ, ಮದುವೆಯಾಗಿ ಮಕ್ಕಳೊಂದಿಗನಾಗುವ ವಯಸ್ಸು, ಆದರೆ ಮದುವೆಯಾಗಿಲ್ಲ; ಆದ್ದರಿಂದ ಹಣ ಸೂರೆಗೊಳಿಸುತ್ತಿದ್ದಾನೆ; ಆ ಚಿತ್ರಗಳು ಅವನ ವೇಶ್ಯೆಯರ ಚಿತ್ರಗಳು, ಅವನ ಮನಮೋಹಿನಿಯರ ಚಿತ್ರಗಳು—ಇಷ್ಟೆ ಜನರ ಆಡಿಕೆಯ ಸಾರಾಂಶ. ಆದರೆ ನಿಜಸ್ಥಿತಿ ಬೇರೆಯಾಗಿತ್ತು: ಅವು ವೇಶ್ಯೆಯರ ಚಿತ್ರಗಳೇನೊ ದಿಟ.

ಶ್ರೀಕಾಂತ ವೇಶ್ಯೆಯರ ಮನೆಯ ಹೊಸ್ತಿಲನ್ನೂ ಸಹ ಮೆಟ್ಟಿರಲಿಲ್ಲ. ಒಬ್ಬಿಬ್ಬರು ವೇಶ್ಯೆಯರು 'ಅಭಿಸಾರಿಕೆ'ಯರಾಗಿ ಶ್ರೀಕಾಂತನೆಡೆಗೆ ಬಂದು ಅವನನ್ನು ತಮ್ಮ ಮೋಹಜಾಲಕ್ಕೆ ಸಿಲುಕಿಸಿಕೊಳ್ಳಬೇಕೆಂದು ಪ್ರಯತ್ನ ಪಟ್ಟು ವಿಫಲರಾಗಿದ್ದರು. ಒಬ್ಬಳು ಮೊಂಡತನಮಾಡಿ, ಎರಡು ಮೂರು ದಿನ ಶ್ರೀಕಾಂತನ ಮನೆಯಲ್ಲಿಯೇ ಇದ್ದುಬಿಟ್ಟು, ತಾನು ತನ್ನ ನೀಚವೃತ್ತಿಯನ್ನು ತ್ಯಜಿಸಿ ಎಂದೆಂದೂ ಅವನ ದಾಸಿಯಾಗಿರುವುದಾಗಿ ಹೇಳಿ, ಶ್ರೀಕಾಂತ ಯಾವ ಪ್ರಕಾರದ ಬೇಡಿಕೆಗೂ ಸಗ್ಗದಿರಲು, ಸತ್ಯಾಗ್ರಹವನ್ನೇ ಹೂಡಿದ್ದಳು! ಆದರೆ ಶ್ರೀಕಾಂತನ ಛಲದ ಮುಂದೆ ಅವಳ ಸತ್ಯಾಗ್ರಹವೂ ಸೋಲಬೇಕಾಯಿತು. ಅಂತೂ ತಾನಾಗಿ ತನ್ನೆಡೆಗೆ ಬಂದ ವೇಶ್ಯೆಯರ ಚಿತ್ರವನ್ನು ಮಾತ್ರ ಬರೆದಿಟ್ಟುಕೊಂಡಿದ್ದ. ಇಂಥವರಲ್ಲಿ ಕೆಲವರು ಚಿತ್ರ ಬರಸಿಕೊಳ್ಳಲು ಒಪ್ಪುತ್ತಿದ್ದರು; ಕೆಲವರು ಒಪ್ಪುತ್ತಿರಲಿಲ್ಲ. ಕೆಲವು ವೇಶ್ಯೆಯರ ಹೊರರೂಪಿನ ಸೌಂದರ್ಯದ ಪ್ರಸಿದ್ಧಿ ಕೇಳಿ, ಅಂಥವರನ್ನು ಕರಸಿಕೊಂಡು, ಅವರು ಕೇಳಿದಷ್ಟು ಹಣ ಕೊಟ್ಟು ಅವರ ಚಿತ್ರಗಳನ್ನು ಬರೆದಿಟ್ಟಿದ್ದ. ಚಿತ್ರಕ್ಕೆ ಕುಳಿತುಕೊಳ್ಳಲು ಒಪ್ಪದವರನ್ನು ಬಲವಂತ ಮಾಡುತ್ತಿರಲಿಲ್ಲ. ಅವರನ್ನು ಉಪಚಾರದ ಮಾತುಗಳಿಂದ ಮಾತಾಡಿಸುತ್ತ ಕೂರಿಸಿಕೊಂಡಿದ್ದು, ಅವರ ಸೌಂದರ್ಯದ ಸಾರವನ್ನೆಲ್ಲ ಹೀರಿಬಿಡುವಂತೆ ಕ್ಷಣಕಾಲ ಅವರನ್ನು ದಿಟ್ಟಿಸಿ ನೋಡುತ್ತಿದ್ದು, ತನ್ನ ಸ್ಮೃತಿಪಟದಲ್ಲಿ ಅವರ ರೂಪಾತಿಶಯದ ವೈಶಿಷ್ಟ್ಯದ ಅಚ್ಚನ್ನು ಗ್ರಹಿಸಿ, ಅವರು ಹೊರಟು ಹೋದ ಕೂಡಲೆ ತನ್ನ ಸ್ಮೃತಿ ಚಿತ್ರಗಳನ್ನು ಪಟದಮೇಲೆ ಇಳಿಸಿ, ಆ ಸ್ತ್ರೀ ರೂಪಗಳಿಗೆ ಉಚಿತ ಸನ್ನಿವೇಶ ವಾತಾವರಣಗಳನ್ನು ಕಲ್ಪಿಸಿ, ಕೆಲವು ಅಪೂರ್ವ ಸುಂದರ ಕಲಾಕೃತಿಗಳನ್ನು ನಿರ್ಮಿಸಿದ್ದನು. ಆ ಚಿತ್ರ–ವ್ಯಕ್ತಿಗಳಿಗೆ ಊರ್ವಶಿ, ರಂಭೆ, ಮೇನಕೆ, ತಿಲೋತ್ತಮೆ ಎಂದು ಹೆಸರು ಕೊಟ್ಟು, ಭೂಲೋಕದ ಬೆಲೆವೆಣ್ಣುಗಳನ್ನು ಸುರಲೋಕದ ಸೂಳೆಯರನ್ನಾಗಿ ಮಾರ್ಪಡಿಸಿದ್ದನು.

ಶ್ರೀಕಾಂತನು ತಾನು ಬರೆದ ಎಲ್ಲ ಸೂಳೆಯರ ಚಿತ್ರಗಳನ್ನೂ, ಮೇಲೆ ಹೇಳಿದ 'ಊರ್ವಶಿ' 'ರಂಭೆ' ಮುಂತಾದ ಚಿತ್ರಗಳ ಮಾದರಿಯಲ್ಲಿ ಕಲ್ಪನಾ ಚಿತ್ರಗಳಂತೆ ಮಾರ್ಪಡಿಸಿ, ವಾಸ್ತವಿಕ ವ್ಯಕ್ತಿಗಳಿಗೆ ಕಲ್ಪನೆಯ ಮೆರುಗು

ಕೊಟ್ಟು ಬರೆದಿದ್ದರೆ ಜನರ ಆಡಿಕೆಗೆ ಅಷ್ಟಾಗಿ ಒಳಗಾಗುತ್ತಿರಲಿಲ್ಲ. ಅವನ ಚಿತ್ರಶಾಲೆಗೆ ಹೋದ ಕೆಲವು ಮಹನೀಯರಿಗೆ ಸೂಳೆಯರ ಭಾವಚಿತ್ರಗಳ ಮೂಲವ್ಯಕ್ತಿಗಳಾರೆಂಬುದು ಬೇಗನೆ ಗೊತ್ತಾಗುತ್ತಿತ್ತು: ಕೆಲವರು ಅವರನ್ನು ದೂರದಿಂದ ಮಾತ್ರ ನೋಡಿದ್ದರು; ಕೆಲವರು ತೀರ ಹತ್ತಿರದಿಂದಲೇ ಕಂಡಿದ್ದರು! ತನ್ನ ಭಾವಚಿತ್ರ ಬರಸಿಕೊಳ್ಳುವುದಕ್ಕೆ ಬಂದಿದ್ದ ಒಬ್ಬ ಶ್ರೀಮಂತ ತನ್ನ ಮೆಚ್ಚಿನ ನಚ್ಚಿನ ವೇಶ್ಯೆಯ ಸುಂದರ ಚಿತ್ರವನ್ನು ಚಿತ್ರಶಾಲೆಯಲ್ಲಿ ಕಂಡು, ತನ್ನ ಭಾವಚಿತ್ರ ಬರಸಿಕೊಳ್ಳುವುದಕ್ಕೆಂದು ತಂದಿದ್ದ ಹಣ ಕೊಟ್ಟು ಆ ವೇಶ್ಯೆಯ ಚಿತ್ರವನ್ನು ಕೊಂಡುಕೊಂಡು ಹೊರಟುಹೋದ!

೨

ಶ್ರೀಕಾಂತ ಹೀಗೆ 'ಜೀವಂತ ಮಾದರಿ'ಗಳನ್ನಿಟ್ಟುಕೊಂಡು ರಮಣಿಯರ ಚಿತ್ರಗಳನ್ನು ಬರೆಯುವುದರಲ್ಲಿ ಅವನ ಉದ್ದೇಶ, ಸ್ತ್ರೀ ಸೌಂದರ್ಯದ ಸೊಗಸನ್ನೂ ವಿವಿಧತೆಯನ್ನೂ ಸಂಗ್ರಹಿಸುವುದಾಗಿತ್ತು. ಅವನು ತನ್ನ ಉದ್ದೇಶದಲ್ಲಿ ತಕ್ಕಮಟ್ಟಿಗೆ ಜಯಶಾಲಿಯಾಗಿ ಯಶಸ್ಸನ್ನೂ ಗಳಿಸಿದ್ದನು. ಆದರೂ ಅವನಿಗೆ ತೃಪ್ತಿಯುಂಟಾಗಿರಲಿಲ್ಲ. ಇದುವರೆಗೆ ಅವನಲ್ಲಿಗೆ ಬಂದಿದ್ದ ವೇಶ್ಯೆಯರಾರೂ ಅನೂನ ಸೌಂದರ್ಯವತಿಯರಾಗಿರಲಿಲ್ಲ. ತಾನು ಅನೂನವಾದ, ಸಂಪೂರ್ಣವಾದ, ಅಸ್ಖಲಿತವಾದ ಸ್ತ್ರೀಸೌಂದರ್ಯದ ಒಂದು ಮಾದರಿಯನ್ನು ಬರೆದಿಟ್ಟರೆ ಸಾಕು. ಅಲ್ಲಿಗೆ ಉದ್ದೇಶ ನೆರವೇರುವುದು. ಅಂದು ಮಾನವನನ್ನು ಚಿತ್ರಿಸುವುದನ್ನು ನಿಲ್ಲಿಸಿ, ದೇಶದೇಶವನ್ನು ಸುತ್ತಿ ಪ್ರಕೃತಿಯ ದಿವ್ಯ ಸೌಂದರ್ಯದ ವಿವಿಧ ವಿಲಾಸಗಳನ್ನು ಚಿತ್ರಿಸುವುದಕ್ಕೆ ತೊಡಗಬೇಕು. ಅದಕ್ಕೆ ಮುಂಚಿತವಾಗಿ ಆದರ್ಶ ಸ್ತ್ರೀಸೌಂದರ್ಯಮೂರ್ತಿಯೊಂದನ್ನು ಸೃಷ್ಟಿಸಿಬಿಡಬೇಕು— ಎಂದು ನಿಶ್ಚಯಿಸಿದನು.

ಆದರ್ಶ ಸ್ತ್ರೀಸೌಂದರ್ಯಮೂರ್ತಿ ಯಾರಾಗಿರಬಹುದು? ಎಂದು ಶ್ರೀಕಾಂತ ಮನದಲ್ಲಿಯೇ ಕಲ್ಪಿಸತೊಡಗಿದ: ಆದರ್ಶ ಸ್ತ್ರೀ ಸೌಂದರ್ಯಮೂರ್ತಿಯೆಂದರೆ 'ರತಿ'ಯೆ. ಹೌದು, ರತಿದೇವಿ. ಸೌಂದರ್ಯದ

ಕಲಶವವಳು. ಅವಳ ಸೌಂದರ್ಯ ಅಮರ: ರತಿಗೆ ಸಾವಿಲ್ಲ, ಆದ್ದರಿಂದ ಅವಳ ಸೌಂದರ್ಯಕ್ಕೂ ಸಾವಿಲ್ಲ. ಮನ್ಮಥನ ಪ್ರಾಣಪದಕವವಳು, ಅವನ ಜೀವದ ಉಸಿರು; ಅವಳ ಪಂಚೇಂದ್ರಿಯಗಳೇ ಅವನ ಪಂಚಬಾಣಗಳು. ಪ್ರಕೃತಿ ದೇವಿಯ ಹಿರಿಯ ಮಗಳು ರತಿ: ಪ್ರಕೃತಿ ಬನದ ಹಸುರು ಹೊತ್ತಿರುವುದು ರತಿಯ ಉಡುಗೆಗಾಗಿ, ಹೂ ಬಿಡುವುದು ಅವಳ ತೊಡವಿಗಾಗಿ. ಸೃಷ್ಟಿಯ ನಾಡಿಯವಳು. ರತಿ ಚೆಲುವು ಒಲವುಗಳ ಸಂಗಮ, ಜಗಜ್ಜೀವಿಗಳ ಪ್ರೇರಕ ಶಕ್ತಿ; ತಾನು ರತಿಯ ಚಿತ್ರವನ್ನು ಚಿತ್ರಿಸಬೇಕು. ರತಿಯ ಚಿತ್ರವನ್ನು ಚಿತ್ರಿಸಬೇಕಾದರೆ ಒಬ್ಬಳು 'ರತಿ'ಯನ್ನೇ ಹುಡುಕಿಕೊಂಡು ಹೋಗಬೇಕು. ಅಂಥ 'ರತಿ' ಎಲ್ಲಿ ದೊರೆತಾಳು? ಸಂಪೂರ್ಣವಾಗಿ ಸ್ವಕಲ್ಪನೆಯಿಂದ, ಸ್ವಪ್ರತಿಭೆಯಿಂದಲೇ ರತಿಯ ಚಿತ್ರವನ್ನು ಏಕೆ ಚಿತ್ರಿಸಬಾರದು? ಇದು ಬಹಳ ಸುಲಭವಲ್ಲವೆ? ಯಾವ ಹೆಣ್ಣನ್ನೂ ಹಿಂಬಾಲಿಸಬೇಕಾಗಿಲ್ಲ ಇದಕ್ಕೆ. ತನ್ನ ಪ್ರತಿಭೆಗೆ ರತಿಯನ್ನು ರೂಪಿಸಿಕೊಳ್ಳುವ ಸಾಮರ್ಥ್ಯವಿಲ್ಲವೆ? ಇರಬಹುದು, ಆ ಸಾಮರ್ಥ್ಯ ತನ್ನ ಪ್ರತಿಭೆಗೆ ಇದ್ದರೂ ಇರಬಹುದು. ಆದರೆ ಇದೆ ಎಂದು ಹೇಗೆ ಹೇಳುವುದು? ಪ್ರಯತ್ನಮಾಡಿ ಮನೋರಥ ಭಗ್ನವಾದರೆ? ಭಗ್ನವಾಗುವುದು ಹೆಚ್ಚು ಸಂಭವ. ಅಲ್ಲದೆ, ಮೊದಲಿನಿಂದಲೂ ಕಲ್ಪನಾಶಕ್ತಿಗೆ ಅಷ್ಟು ಹೊರೆಹೊರಿಸಿ ನೋಯಿಸಿಲ್ಲ ತಾನು. ಎಲ್ಲಿಯೂ ಕಾಣದುದನ್ನು ಕಲ್ಪಿಸಿಕೊಳ್ಳುವೆನೆಂಬ ಮಾತು ಸುಳ್ಳು: ತಾನು 'ರತಿ'ಯನ್ನು ಕಲ್ಪಿಸಿಕೊಳ್ಳುವಂದು, ತಾನು ಎಲ್ಲೋ ಎಂದೋ ಕಂಡ ಒಂದು ವ್ಯಕ್ತಿಯ ರೂಪೋ, ಇಲ್ಲವೆ ತಾನು ಕಂಡ ಹಲವು ವ್ಯಕ್ತಿಗಳ ಸ್ವರೂಪ ಖಂಡಗಳು ಒಟ್ಟುಗೂಡಿಕೊಂಡು ಆದ ಒಂದು ವ್ಯಕ್ತಿಯ ರೂಪೋ, ತನ್ನ ಚಿತ್ತಭಿತ್ತಿಯಲ್ಲಿ ಚಿತ್ರಿತವಾಗಿ ಅದೇ ಪಟದ ಮೇಲೆ ಮೂಡಿಬಂದರೆ ತನ್ನ ಕಲ್ಪನೆ ಸ್ವಂತವಾಗಿ ಏನು ಸೃಷ್ಟಿಸಿದಹಾಗಾಯಿತು? ಆ ರೀತಿ ಬರೆದ ಚಿತ್ರವನ್ನು ಕಲ್ಪನೆಯ ಕೂಸೆಂದು ಕರೆದು ತನ್ನನ್ನು ತಾನೇ ವಂಚಿಸಿಕೊಳ್ಳಬೇಕೆ? ಜಗತ್ತಿನಲ್ಲಿ ಎಂದಿನಿಂದ ಇಂದಿನವರೆಗೆ ನವೋನವವಾಗಿ ಸೃಷ್ಟಿಗೊಳ್ಳುತ್ತಿರುವ ಸ್ತ್ರೀ ಸೌಂದರ್ಯದ ಮಾದರಿಗಳನ್ನು ಮೀರಿ ತನ್ನ ಕಲ್ಪನೆ ಓಡಬಲ್ಲುದೆ? ಆ ಹುಚ್ಚು ಸಾಹಸವೇಕೆ? ಆದ್ದರಿಂದ ಉತ್ತಮವಾದ ಹೆಣ್ಣೊಬ್ಬಳನ್ನು ಮಾದರಿ

ಯಾಗಿಟ್ಟುಕೊಂಡು, ಅವಳ ಪ್ರತಿರೂಪಿಗೆ ತನ್ನ ಪ್ರತಿಭೆಯ ಬಣ್ಣ ಕೊಟ್ಟು ರತಿಯ ಚಿತ್ರವನ್ನು ನಿರ್ಮಿಸುವುದೇ ಸೂಕ್ತ—ಎಂದು ನಿರ್ಧರಿಸಿದನು.

ಹೀಗೆಂದು ನಿರ್ಧರಿಸಿದ್ದ ಮೇಲೆ ಶ್ರೀಕಾಂತನನ್ನು ಕಾಡಿದ ಮರು ಪ್ರಶ್ನೆ–ಅಂಥ ಹೆಣ್ಣು ದೊರೆಯುವುದೆಲ್ಲಿ? ಜನರು ಆಡಿಕೊಂಡರೂ ಚಿಂತೆಯಿಲ್ಲ; ಹಣ ವೆಚ್ಚವಾದರೂ ಚಿಂತೆಯಿಲ್ಲ; ಮುಖ್ಯಮುಖ್ಯ ನಗರಗಳ ಅತ್ಯಂತ ಚೆಲುವೆಯರಾದ ವೇಶ್ಯೆಯರನ್ನೆಲ್ಲಾ ನೋಡಿ ಅವರಲ್ಲಿ ಪರಮಸುಂದರಿಯಾದ ವೇಶ್ಯೆಯನ್ನು ರತಿಯ ಮಾದರಿಯಾಗಿ ಉಪಯೋಗಿಸಿಕೊಳ್ಳುವುದೆಂದು ಅವನಿಗೆ ಮೊದಲು ಅನ್ನಿಸಿತು. ಛೆ! ಚೆಲುವು ಒಲವುಗಳನ್ನು ಮಾರಿಕೊಂಡು ದುಸ್ಖಲಿತ ಯೌವನೆಯರಾದ ಅವರನ್ನು ಚೆಲುವುಒಲವುಗಳ ಅಖಂಡ ಮೂರ್ತಿಯಾದ ಚಿರಯೌವನೆಯಾದ, "ರತಿ"ಯ ಪ್ರತಿಮೂರ್ತಿಯಾಗಿ ಇರಿಸಿಕೊಳ್ಳುವುದೆ! ಇದು ಸಲ್ಲದ ಕಲ್ಪನೆ. ಇನ್ನುಮೇಲೆ ವೇಶ್ಯೆಯರ ದರ್ಶನವನ್ನು ಕೂಡ ಮಾಡಕೂಡದು! ರತಿ ದರ್ಶನಕ್ಕೆ ಭಂಗ ತಂದುಕೊಳ್ಳಕೂಡದು. "ನಾನು ರತಿಯ ಚಿತ್ರ ಬರೆಯಬೇಕು. ನಿಮ್ಮ ಹೆಂಡತಿಯನ್ನು ಇಲ್ಲವೆ ನಿಮ್ಮ ಮಗಳನ್ನು, ಇಲ್ಲವೆ ನಿಮ್ಮ ಸೋದರಿಯನ್ನು, ಒಂದು ತಿಂಗಳಮಟ್ಟಿಗೆ, ಬೇಡ ಒಂದು ವಾರ, ಕಟ್ಟಕಡೆಗೆ ಒಂದು ದಿನ ಕಳಿಸಿಕೊಡಿ, ಬೇರೆ ಎಣಿಸಬೇಡಿ, ನೀವೂ ಜೊತೆಯಲ್ಲಿ ಬನ್ನಿ"—ಎಂದು ಯಾರನ್ನು ಬೇಡುವುದು? ತನ್ನ ಕೋರಿಕೆ ನಡಸಿಕೊಡಲು ಯಾರು ಮುಂದೆ ಬರುವರು, ಯಾರು ಒಪ್ಪುವರು? ಹೀಗೆ ಕೇಳಹೋದರೆ ಜನರು ನಗರೆ, ಶಂಕಿಸರೆ, ಹುಚ್ಚ ಎನ್ನರೆ? ನಮ್ಮ ಸಮಾಜ ಅಷ್ಟೊಂದು ಮುಂದುವರಿದಿದೆಯೆ? ತನ್ನ ಗೆಳೆಯನೊಬ್ಬನಿದ್ದಾನೆ; ಒಬ್ಬನೇ ಒಬ್ಬನಾದ ತನ್ನ ಹೃದಯ ಮಿತ್ರ;....ಲ್ಲಿ ನೆಲಸಿದ್ದಾನೆ; ಅಲ್ಲಿಯ ತರುಣಿಯೊಬ್ಬಳನ್ನು ಮದುವೆಯಾಗಿದ್ದಾನೆ; ಕಳೆದ ವರ್ಷ ನೋಡಿದ್ದು; ವಿದ್ಯಾವತಿ, ಅತ್ಯಂತ ಚೆಲುವೆ; ಮಕ್ಕಳಾಗಿಲ್ಲ. ಅಲ್ಲಿಗೆ ಹೋಗಿ ಗೆಳೆಯನಿಗೆ ಉದ್ದೇಶ ತಿಳಿಸಿ, ಚಿತ್ರ ಬರೆಯಬಹುದು. ಗೆಳೆಯನು ಒಪ್ಪಿದರೆ ಸರಿಹೋಯಿತು, ಇಲ್ಲದಿದ್ದರೆ ಗೆಳೆತನಕ್ಕೆ ಹಾನಿ ತಂದುಕೊಳ್ಳಬೇಕಾದೀತು. ಹೇಗೂ ತನ್ನ ಉದ್ದೇಶ ನೆರವೇರುವಂತೆ ತೋರಲಿಲ್ಲ ಶ್ರೀಕಾಂತನಿಗೆ. ಮನೆಯಲ್ಲಿ ಕುಳಿತರೆ ಉದ್ದೇಶ ಹೇಗೆ ನೆರವೇರೀತು, ಹೊರಹೊರಟು ಏಕೆ ಪ್ರಯತ್ನಮಾಡಿ ನೋಡಬಾರದು? ನಿರಾಶ್ರಿತೆಯಾದ, ಆದರೂ

ಶುದ್ಧಶೀಲಳಾದ, ಒಬ್ಬಳು ಹೆಣ್ಣುಮಗಳು ದೊರೆಯಳೆ ಈ ದೇಶದಲ್ಲಿ? ಶೀಲವಂತಿಕೆ ಇನ್ನೂ ಅಷ್ಟು ಕೆಟ್ಟಿಲ್ಲದ ಈ ಪುಣ್ಯಭೂಮಿಯಲ್ಲಿ? ಹೊರಹೊರಟು ನೋಡೋಣ-ಎಂದು ನಿರ್ಧರಿಸಿದನು ಶ್ರೀಕಾಂತ.

೩

ಶ್ರೀಕಾಂತ ರತಿಯನ್ನು ಹುಡುಕಿಕೊಂಡು ಹೊರಟ!

ಪ್ರತಿದಿನವೂ ಬೆಳಗ್ಗೆ ಎದ್ದು ಸ್ನಾನ ಮಾಡಿ, ಏನಾದರೂ ತಿಂಡಿತಿಂದು, ಹೊರಹೊರಡುತ್ತಿದ್ದ. ಒಂದೊಂದು ದಿನ ಊರಿನ ಒಂದೊಂದು ಭಾಗವಾಗಿ ಕೆಲವು ದಿನಗಳವರೆಗೆ ಊರಿನಲ್ಲೆಲ್ಲಾ ಸುತ್ತಾಡಿದ. ಇದರಿಂದ ಊರನ್ನೆಲ್ಲಾ ಸಂಪೂರ್ಣವಾಗಿ ನೋಡಿದ ಹಾಗಾಯಿತೆ ಹೊರತು ಅವನ ಗುರಿ ಸಾಧಿಸಲಿಲ್ಲ. ನಮ್ಮ ನಾಡಿನಲ್ಲಿ ಬೀದಿಯಲ್ಲಿ ಹೆಂಗಸರು ತಿರುಗಾಡುವುದು ಅಪರೂಪ, ಹೆಂಗಸರಿರುವ ಸ್ಥಳ ಅಡುಗೆಮನೆ ಎಂದು ಗೊತ್ತಿಲ್ಲದೆ ಇರಲಿಲ್ಲ ಶ್ರೀಕಾಂತನಿಗೆ. ಸಂಜೆಯ ವೇಳೆ ತಿರುಗಾಡಲು ಬರುತ್ತಿದ್ದ ಹೆಂಗಸರನೇಕರು ಗೃಹಿಣಿಯರು. ಒಮ್ಮೊಮ್ಮೆ ಕೆಲವರು ಒಂಟೊಂಟಿಯಾಗಿಯೇ ಸಿಕ್ಕುತ್ತಿದ್ದರು; ಅವರು ಸುಂದರಿಯರಾಗಿಯೂ ಇರುತ್ತಿದ್ದರು; ಅವರಲ್ಲಿ ಬೆಡಗು ಬಿನ್ನಾಣ ಇರುತ್ತಿತ್ತು; ತಾನು ತನ್ನ ಉದ್ದೇಶ ಅವರಿಗೆ ತಿಳಿಸಿದರೆ ಅವರು ಒಪ್ಪಿದರೂ ಒಪ್ಪಬಹುದು ಎಂದು ತೋರುತ್ತಿತ್ತು ಅವನಿಗೆ. ಅವರು ಅನಪೇಕ್ಷಿತರಾಗಿ ದಾರಿಗರಕಡೆಗೆ ಬೀರುತ್ತಿದ್ದ ನೋಟದಿಂದ, ನಗೆಯಿಂದ, ಅವರೂ ವೇಶ್ಯೆಯರೇ ಇರಬಹುದು, ವೇಶ್ಯಾವೃತ್ತಿಯವರಲ್ಲದಿದ್ದರೂ ವೇಶ್ಯಾವರ್ತನೆಯುಳ್ಳವರಿರಬಹುದು, ಇಲ್ಲವೆ ಅಂಥ ವರ್ತನೆಯಲ್ಲಿ ಪ್ರವೃತ್ತಿಯುಳ್ಳವರಾದರೂ ಇರಬಹುದು-ಎಂದು ತೋರುತ್ತಿತ್ತು ಅವನಿಗೆ. ಅಂತೂ ಯಾರೂ ಅವನ ಮನಸ್ಸಿಗೆ ಒಪ್ಪಿಬರುತ್ತಿರಲಿಲ್ಲ. ಆಕಸ್ಮಾತ್ ಒಪ್ಪಾದ ವ್ಯಕ್ತಿಯನ್ನು ಕಂಡಾಗ, ಏಕೋ ಅವರ ಬಳಿಗೆ ಹೋಗಿ ಕೇಳಲು ಹಿಂಜರಿಯುತ್ತಿದ್ದ.

ಹೀಗೆ ಊರಿನ ಸುತ್ತಾಟದಲ್ಲಿ ಒಂದೆರಡು ತಿಂಗಳೂ ಕಳೆಯಿತು. ಬೇರೆ ಬೇರೆ ಪ್ರಮುಖ ನಗರಗಳನ್ನು ಸುತ್ತಾಡಿಕೊಂಡು ಬರಲು ಹೊರಟ. ತನ್ನ

ಊರಿನಲ್ಲಿ ಯಾವ ಅನುಭವವಾಗಿತ್ತೊ, ಹೊರ ಊರುಗಳಲ್ಲಿಯೂ ಅದೇ ಅನುಭವ ಇಮ್ಮಡಿಯ ಪ್ರಮಾಣದಲ್ಲಿ ಆಯಿತು. ಕಾಣದ ಊರುಗಳಲ್ಲಿ ಕಂಡ ಹೆಣ್ಣುಮಕ್ಕಳನ್ನು ಕಣ್ಣೆತ್ತಿ ನೋಡಲು ಕೂಡ ಹಿಂಜರಿಯುತ್ತಿದ್ದ. ಹುಡುಕಾಟ ಮೊದಲುಮಾಡುವ ಮುನ್ನ ಅವನಿಗೆ ತೋರಿಬರದೆ ಇದ್ದ ಭಾವಗಳು ಈಗ ತೋರಿಬಂದು ಹಾಗೆ ಹಿಂಜರಿಯುತ್ತಿದ್ದ: ಪರಸ್ತ್ರೀಯನ್ನು–ಯಾವ ದೇಶದವಳಾಗಲಿ, ಯಾವ ಕುಲದವಳಾಗಲಿ, ಯಾವ ವಯಸ್ಸಿನವಳಾಗಲಿ, ಯಾವ ಸಂದರ್ಭದಲ್ಲಿಯೇ ಆಗಲಿ, ತಾನು ನೋಡುತ್ತಿರುವಂತೆ ಪರಿಶೀಲನ ದೃಷ್ಟಿಯಿಂದ ದಿಟ್ಟಿಸಿನೋಡುವುದು ನಮ್ಮ ಸಂಸ್ಕೃತಿಗೆ ವಿರುದ್ಧವಾದದ್ದು, ವಿಪ್ರಿಯವಾದದ್ದು ಎಂಬ ಭಾವ ಒಂದು; ಅಲ್ಲದೆ, ತಾನು ಹೀಗೆ ವರ್ತಿಸುವಾಗ ಯಾರು ಕಂಡು ಏನು ಅಪಾರ್ಥವಾಗುವುದೋ ಎಂಬ ಸಜ್ಜನ ಸಹಜವಾದ ಹೆದರಿಕೆಯ ಭಾವ ಮತ್ತೊಂದು. ಅಂತೂ, ಕಾರಣ ಯಾವುದಾದರೂ ಇರಲಿ, ಶ್ರೀಕಾಂತನ ಪ್ರಯತ್ನ ನಿಷ್ಫಲವಾಯಿತು; ಬೇಕಾದಷ್ಟು ಹಣ ಖರ್ಚುಮಾಡಿ, ಹಲವಾರು ತಿಂಗಳುಗಳು ಊರೂರು ಸುತ್ತಿ, ಹಿಂದಿರುಗಿ ಬಂದನು.

೪

ಮನೆ ಬಿಟ್ಟು ತಿಂಗಳುಗಳಾಗಿ ಹೋಗಿವೆ. ಮಾಲಿಯನ್ನು ಕೆಲಸದಿಂದ ಬಿಡಿಸದೆ ಇದ್ದುದರಿಂದ ಮನೆಯ ಮುಂದಿನ ಕೈತೋಟವೇನೊ ಎಂದಿನಂತೆ ಸೊಗಸಾಗಿಯೆ ಇದೆ ಆದರೆ ಮನೆಯ ಒಳಗೆ, ತನ್ನ ಹೃದಯ–ಮನೋಮಂದಿರಗಳಲ್ಲಿ ಹೇಗೋ ಹಾಗೆ, ಬಹಳ ಅವ್ಯವಸ್ಥೆಯುಂಟಾಗಿದೆ, ಕೊಳಕು ಬಂದು ಕೂತಿದೆ. ನೆಲದಮೇಲೆ ಧೂಳು, ಗೋಡೆಯಮೇಲೆ ಧೂಳು, ಚಿತ್ರಗಳಮೇಲೆ ಧೂಳು–ಮನೆಯೆಲ್ಲ ಧೂಳೀಮಯವಾಗಿಹೋಗಿದೆ. ಎಲ್ಲಿ ನೋಡಿದರೂ ಇಲಿಯ ಹಿಕ್ಕೆಗಳು. ತಾನು ಬರೆಯುತ್ತಿದ್ದು ಹಾಗೆಯೇ ಅರೆಗೆಲಸದಲ್ಲಿ ತೆರೆಹಾಕಿ ಬಿಟ್ಟುಹೋಗಿದ್ದ ಚಿತ್ರವಿಟ್ಟಿದ್ದ ನಿಲುವಿನ ಮೇಲೆ ಇಲಿಗಳು ಸರ್ಕಸ್ ಮಾಡಿರಲೇ ಬೇಕು: ಏಕೆಂದರೆ, ತೆರೆ ಚಿಂದಿಚಿಂದಿಯಾಗಿ ನೇತಾಡುತ್ತಿದೆ! ಚಿತ್ರಪಟದ ಬಟ್ಟೆ ಕಡಿದು ಕಡಿದು ರಂಧ್ರಮಯವಾಗಿದೆ! ಬಣ್ಣಗಳನ್ನು ಸಹ ಬಿಟ್ಟಿಲ್ಲ ಇಲಿಗಳು! ಇನ್ನು ಅಡಿಗೆಯಮನೆಯ

ಗತಿ ಏನಾಗಿದೆಯೋ! ಮನೆಯ ಒಳಗೂ ಸ್ವಲ್ಪ ನೋಡಿಕೊಳ್ಳುವಂತೆ ಮಾಲಿಗೆ ಹೇಳಿ ಮನೆಯನ್ನು ಆತನ ವಶಕ್ಕೆ ಒಪ್ಪಿಸಿಹೋಗಿದ್ದರೆ ಚೆನ್ನಾಗಿತ್ತು—ಎಂದೆನಿಸಿತು ಶ್ರೀಕಾಂತನಿಗೆ.

ಮನೆಯ ಈ ಅವ್ಯವಸ್ಥೆ ತನ್ನ ಆಂತರ್ಯದ ಅವ್ಯವಸ್ಥೆಗೆ ಹೊಂದಿಕೊಂಡಿದ್ದುದರಿಂದ ಶ್ರೀಕಾಂತನಿಗೆ ಕೋಪವಾಗಲಿ, ಜುಗುಪ್ಸೆಯಾಗಲಿ ಉಂಟಾಗಲಿಲ್ಲ. ಅಲ್ಲದೆ, ಯಾರಮೇಲೆ ಕೋಪಗೊಳ್ಳಬೇಕು? ಅವನು ಮನೆಯ ಒಳಹೊಕ್ಕಕೂಡಲೆ—ಬೆಳಗ್ಗೆ ೭-೮ ಗಂಟೆಯ ಸಮಯದಲ್ಲಿ—ಧೂಳು ಸಹ ಕೊಡವದೆ ಹಾಗೆಯೇ ಒಂದು ಸೋಫಾದ ಮೇಲೆ ಕುಳಿತುಕೊಂಡು ಕಣ್ಣು ಮುಚ್ಚಿದ. ತೋಟದ ಮಾಲಿ ಬಂದು 'ಯಾವಾಗ ಬಂದಿರಿ' ಎಂದು ವಿಚಾರಿಸಿದರೂ ಉತ್ತರ ಕೊಡದೆ ಹಾಗೆಯೇ ಕುಳಿತುಬಿಟ್ಟ. ಧಣಿಗಳು ದಣಿದಿದ್ದಾರೆ, ಆಮೇಲೆ ವಿಚಾರಿಸೋಣ-ಎಂದು ಮಾಲಿ ಹೊರಟುಹೋದ. ಶ್ರೀಕಾಂತನಿಗೆ ನಿದ್ದೆಯ ಜೊಂಪು ಬಂದಿತ್ತು.

ನಿದ್ದೆಯ ಜೊಂಪಿನಲ್ಲಿ ಯಾರೋ ಹಾಡುತ್ತ ಬಂದಂತಾಯಿತು; ರತಿ ಕಾಣಿಸಿಕೊಂಡಳು!

"ನೀನು ಯಾರು?"

"ನಾನು ರತಿ."

"ರತಿಯೆ? ಇಷ್ಟು ದಿನ ನಿನಗಾಗಿ ಹುಡುಕಿ ಹುಡುಕಿ ಸಾಕಾಗಿ ಹೋಯಿತು. ಎಲ್ಲಿದ್ದೆ ನೀನು?"

"ನಿನ್ನ ಹೃದಯದಲ್ಲಿ."

"ಹೌದು, ನನ್ನ ಹೃದಯದಲ್ಲಿದ್ದೆ. ನನ್ನ ಹೃದಯದಲ್ಲಿ ಬರಿಯ ಭಾವವಾಗಿದ್ದೆ. ಭಾವವಾಗಿದ್ದ ನಿನಗೆ ಒಂದು ರೂಪಕೊಡಲು ರೂಪನ್ನು ಮಾತ್ರ ಹುಡುಕುತ್ತಿದ್ದೆ; ರೂಪ ನನಗೆ ಸಿಕ್ಕಲಿಲ್ಲ. ನೀನು ರೂಪಿಲ್ಲದ ರತಿ. ನೀನು ಬೇಡ, ತೊಲಗು."

"ಸಿಟ್ಟಾಗಬೇಡ, ಕಾಂತ. ನಿನಗೆ ಬೇಸರವಾಗಿದೆ. ಇನ್ನು ಕೊಂಚ ಹಾಡುತ್ತೇನೆ. ಆಮೇಲೆ ನನ್ನ ನಿಜಸ್ವರೂಪ ಗೊತ್ತಾಗುತ್ತದೆ"ಎಂದು ರತಿ ಹಾಡತೊಡಗಿದಳು.

ಎಂಥ ಮನೋಹರವಾದ ಕಂಠ! ಹಾಡು ಏನೆಂಬುದು ಶ್ರೀಕಾಂತನಿಗೆ ಗೊತ್ತಾಗಲಿಲ್ಲ. ಸ್ವರದ ಮಾಧುರ್ಯ ಎಲ್ಲವನ್ನೂ ಮರೆಸಿತ್ತು. ಅವನ ಹೃದಯ ತಿಳಿಯಾಯಿತು, ಮನಸ್ಸು ಪ್ರಸನ್ನವಾಯಿತು. ಇದ್ದಕ್ಕಿದ್ದಂತೆ ಹಾಡು ನಿಂತಿತು.

ರತಿ ಕೇಳಿದಳು: "ನನ್ನ ನಿಜಸ್ವರೂಪ ಈಗ ಗೊತ್ತಾಯಿತೆ? ನೋಡು, ನಿನ್ನ ಎದುರಿಗೆ ನಿಂತಿದ್ದೇನೆ, ಕಣ್ಣುಬಿಟ್ಟು ನೋಡು."

ಶ್ರೀಕಾಂತ ತಾನು ಕಣ್ಣುಬಿಟ್ಟು ನೋಡಿದಂತೆ ಭಾವಿಸಿಕೊಂಡ; ಎದುರಿಗೆ ಯಾವ ರೂಪವೂ ಕಾಣಲಿಲ್ಲ:

"ಮೋಸಗಾರ್ತಿ! ಅನಂಗನ ಮಡದಿಯಾದ ನಿನಗೆ ಅಂಗವಿದೆಯೇನು? ರೂಪಿದೆಯೇನು? ನಿನ್ನ ನಿಜಸ್ವರೂಪ ಯಾವುದು? ಸುಳ್ಳು ಬಗುಳಬೇಡ, ನಡೆ!"

"ಕಣ್ಣು ಮುಚ್ಚಿ ಕುಳಿತಿರುವೆ ಕಾಂತ. ಕಣ್ಣು ಬಿಟ್ಟು ನೋಡು."

ಶ್ರೀಕಾಂತನಿಗೆ ಕೋಪ ಇಮ್ಮಡಿಸಿತು: "ತೊಲಗಾಚೆ" ಎಂದು ಕಣ್ಣು ಬಿಟ್ಟ; ನಿಜವಾಗಿಯೂ ಕಣ್ಣು ಬಿಟ್ಟ.

"ಸ್ವಾಮಿ....ಬಹಳ ಹೊತ್ತಿನಿಂದ ನಿಂತಿದ್ದೆ....ಹೊರಟುಹೋಗುತೀನಿ....ಕೋಪಮಾಡಬೇಡಿ" ಎಂಬ ಮಾತುಗಳು ಬಾಗಿಲ ಕಡೆಯಿಂದ ಕೇಳಬಂದುವು.

ಶ್ರೀಕಾಂತ ಹಾಗೆಯೇ ನೋಡಿದ: ಬಾಗಿಲು ತೆರೆದಿತ್ತು; ಬಾಗಿಲ ಬಳಿ ಒಬ್ಬ ತರುಣಿ ನಿಂತಿದ್ದಳು. ಅವಳ ಕೆದರಿದ ಕೂದಲು, ಹರುಕು ಬಟ್ಟೆ, ಕೊಳಕು ಮೈ, ದೀನವಾದ ನೋಟ—ಇವು ಅವಳು ತಿರುಕಿಯೆಂಬುದನ್ನು ಸಾರುತ್ತಿದ್ದುವು ಶ್ರೀಕಾಂತ ಅವಳ ಮುಖವನ್ನು ದಿಟ್ಟಿಸಿನೋಡುತ್ತಿದ್ದ.

ಶ್ರೀಕಾಂತ ಹಾಗೆ ದಿಟ್ಟಿಸುವುದನ್ನು ನೋಡಿ ತಿರುಕಿಗೆ ಭಯವಾಯಿತು. "ತೊಲಗಾಚೆ" ಎನ್ನಿಸಿಕೊಳ್ಳುವುದಕ್ಕಿಂತ ಮುಂಚೆಯೆ ತೊಲಗುವುದು ಒಳ್ಳೆಯದೆಂದು ಹೊರಡಲು ಹಿಂದಿರುಗಿದಳು.

"ಸ್ವಲ್ಪ ನಿಂತುಕೊ, ಕಾಸು ಕೊಡುತ್ತೇನೆ. ಹಾಡಲು ಬರುತ್ತದೆಯೇನು ನಿನಗೆ?"

"ಬರುತ್ತೆ."

"ಹಾಗಾದರೆ ಹಾಡು."

ತಿರುಕಿ ಹಾಡಿದಳು.

ಈ ಹಾಡಿನ ದನಿಯನ್ನು ಶ್ರೀಕಾಂತ ತುಸ ಹೊತ್ತಿನ ಹಿಂದೆ ಕೇಳಿದ್ದಂತೆ ನೆನಪಾಯಿತು.

"ನೀನು ಮೊದಲೊಮ್ಮೆ ಇಲ್ಲಿ ಹಾಡಿದೆಯೇನು ?"

"ಹೌದು. ಅಂಗಳದಲ್ಲಿ ಹಾಡುತ್ತ ನಿಂತಿದ್ದೆ."

ಶ್ರೀಕಾಂತ ತನಗೆ ತಾನೇ ನಕ್ಕ. ಅವಳನ್ನು ತುಸ ಹೊತ್ತು ದಿಟ್ಟಿಸಿ ನೋಡಿದ. ಹಾಡಿದ್ದು ಇವಳೆ ಏನು? ಈಗ ತುಸ ಹೊತ್ತಿನ ಹಿಂದೆ ತನ್ನ ಬಗೆ–ಚಿತ್ರದಲ್ಲಿ 'ರತಿ'ಯಾಗಿ ಬಂದಿದ್ದವಳು ಇವಳೆ ಏನು? ಹೌದು, ಇವಳೇ ಇರಬಹುದು. ಆ ರತಿಗೆ ರೂಪವಿರಲಿಲ್ಲ; ಇವಳಿಗೆ ರೂಪವಿದೆ. ಎಂಥ ರೂಪ! ಬೆಡಗಿನ ರೂಪವಲ್ಲ; ಥಳಕಿನ ರೂಪವಲ್ಲ; ಉದ್ಯಾನದಲ್ಲಿ ಬೆಳಸಿದ ರೋಜಾ ಹೂವಿನ ರೂಪವಲ್ಲ; ಕಾಡುಹೂವಿನ ಕಮನೀಯ ರೂಪ. ಅವಳ ರೂಪ ಯಾರಿಗೂ ಕಾಣುವಂತಿಲ್ಲ, ಕಂಡಿರಲಾರದು. ಮಲಿನತೆಯ ಮರೆಯಲ್ಲಿ ಅಡಗಿದೆ. ಗಣಿಯಿಂದ ತೆಗೆದ ಹೊಚ್ಚ ಹೊಸ ರತ್ನದಂತಿದೆ. ಅದನ್ನು ಕಡೆದು ಅದಕ್ಕೆ ಆಕಾರ ತಂದರೆ ಅನರ್ಘ್ಯ ರತ್ನವಾಗುತ್ತದೆ. ತಾನು ಆ ಕೆಲಸ ಮಾಡಿದರೆ ಇವಳು ನಿಜವಾಗಿಯೂ ರತಿಯಾಗುತ್ತಾಳೆ. ಏಕೆ ಮಾಡಬಾರದು? ಹಾಗೆ ಮಾಡುವುದೇ ಸಿದ್ಧ.

ಶ್ರೀಕಾಂತ ಹೀಗೆ ನಿರ್ಧರಿಸಿ, ಕೇಳಿದ :

"ನಿನಗೆ ತಂದೆ ತಾಯಿ ಯಾರೂ ಇಲ್ಲವೇನಮ್ಮ?"

"ಇಲ್ಲ ಬುದ್ದಿ. ನಾನು ಮಗುವಾಗಿದ್ದಾಗಲೆ ತಂದೆ ಶೀರಿಹೋದ್ರು. ತಾಯಿ ಕುರುಡಿ ಬುದ್ದಿ. ಬಿಕ್ಸ ಎತ್ತಿ ಹೊಟ್ಟೆ ಹೊರಕೋತಿದ್ಳು. ನಾನು ಅವಳ ಕೈ ಹಿಡಿದುಕೊಂಡು ಕರಕೊಂಡು ಹೋಗ್ತಿದ್ದೆ. ಭಾಳ ಚೆನ್ನಾಗಿ ಹಾಡ್ತಿದ್ಳು ಬುದ್ದಿ. ಅವಳೂ ತೀರಿಹೋಗಿ ಎರಡು ವರ್ಸ ಆತು ಬುದ್ದಿ. ನಾನು ಬಿಕ್ಸ ಮಾಡಿಕೊಂಡೇ ಜೀವಣ ಮಾಡ್ತಾ ಇದ್ದೀನಿ ಬುದ್ದಿ. ನನಗೂ ಬೇಜಾರಾಗೈತೆ. ಎಲ್ಲಾದರೂ ಕೆಲ್ಸ ಕೊಡ್ಸಿ ಬುದ್ದಿ."

"ನಿನ್ನ ಹೆಸರೇನಮ್ಮಾ?"

"ಲಕ್ಸ್ಮಿ ಅಂತ ಕರೀತಿದ್ಳು ನಮ್ಮವ್ವ."

"ನೋಡು, ನಮ್ಮ ಮನೆಯಲ್ಲೇ ಕೆಲಸ ಇದೆ. ಅಂದ್ರೆ ಕೆಲಸ ತುಂಬ ಹೆಚ್ಚು. ಸದಾ ಮನೆಯಲ್ಲೇ ಇರಬೇಕು. ಇಲ್ಲೇ ಮಲಗಿಕೊಳ್ಳಬೇಕು. ಇರುತೀಯೇನು?"

"ಆಗಲಿ ಬುದ್ಧಿ. ಹೀಗೆ ಕರೆದು ಕೆಲಸ ಕೊಡೋರ್‍ಯಾರು. ನಾಳೆ ಬರಲೆ ಬುದ್ಧಿ ?"

"ನಾಳೆ ಯಾಕೆ, ಇವೊತ್ತಿನಿಂದಲೇ ಇದ್ದುಬಿಡು. ನಾನು ಸ್ವಲ್ಪ ಪೇಟೆಗೆ ಹೋಗಿಬಿಟ್ಟು ಬರ್‍ತೀನಿ. ಅಷ್ಟು ಹೊತ್ತಿಗೆ, ನಮ್ಮ ತೋಟದ ಮಾಲಿ ಎಲ್ಲಾ ತೋರಿಸಿಕೊಡ್ತಾನೆ. ಮನೆಯೆಲ್ಲ ಚೊಕ್ಕಟವಾಗಿ ಗುಡಿಸಿ, ನೀರಿನ ಮನೆಗೆ ನೀರು ತುಂಬಿ, ನೀರು ಕಾಯಿಸಿರುತ್ತೀಯ ?"

"ಆಗಲಿ ಬುದ್ಧಿ."

ಶ್ರೀಕಾಂತ ತೋಟದ ಮಾಲಿಯನ್ನು ಕರೆದು ಲಕ್ಷ್ಮಿಯ ಕೈಲಿ ಮನೆ ಚೊಕ್ಕಟ ಮಾಡಿಸಬೇಕೆಂದೂ, ಜೊತೆಗೆ ಸಹಾಯ ಮಾಡಬೇಕೆಂದೂ, ಅವಳನ್ನು ಕಠಿನವಾಗಿ ಮಾತನಾಡಿಸಕೂಡದೆಂದೂ ಹೇಳಿ ಪೇಟೆಗೆ ಹೊರಟು ಹೋದ.

೫

ಶ್ರೀಕಾಂತ ಪೇಟೆಗೆ ಹೋಗಿ ಮನೆಗೆ ಬೇಕಾದ ದಿನಸಿ ಸಾಮುಗ್ರಿ ಮುಂತಾದ್ದೆಲ್ಲವನ್ನೂ ತೆಗೆದುಕೊಂಡು, ಲಕ್ಷ್ಮಿಗೆ ಬೇಕಾದ ಸೀರೆ ಕುಪ್ಪಸ ಮುಂತಾದ ಕೆಲವು ಬಟ್ಟೆಬರೆ ತೆಗೆದುಕೊಂಡು ಬಂದ. ಅವನು ಬರುವ ಹೊತ್ತಿಗೆ ಮಧ್ಯಾಹ್ನ ಹನ್ನೆರಡರ ಮೇಲಾಗಿತ್ತು. ಬಂದು ನೋಡುತ್ತಾನೆ, ಮಾಯದಿಂದಲೋ ಎಂಬಂತೆ ಮನೆ ಅಚ್ಚುಕಟ್ಟಾಗಿಹೋಗಿದೆ! ಬಚ್ಚಲ ಮನಯಲ್ಲಿ ನೀರು ಕಾದಿದೆ. ಲಕ್ಷ್ಮಿಯ ಮುಖ ನೋಡಿದ; ಕರುಣೆಯ ನೋಟದಿಂದ ಕೂಡಿದ ನಗೆ ಬೀರಿದ. "ಬಹಳ ಕೆಲಸ. ದಣಿವಾಯಿತೇನು ?" ಎಂದು ಕೇಳುವಂತಿತ್ತು ಅವನ ನೋಟ. "ಏನೂ ದಣಿವಾಗಿಲ್ಲ; ಧಣಿಯ ಸೇವೆ" ಎನ್ನುವಂತೆ ಸಂತೋಷ-ಕೃತಜ್ಞತೆಯ ಭಾವ ಬೀರುತ್ತಿತ್ತು ಲಕ್ಷ್ಮಿಯ ಮರುನೋಟ.

ಶ್ರೀಕಾಂತನಿಗೆ ಅಡಿಗೆ ಮಾಡುವುದು ಎಂದಿನಿಂದಲೂ ಅಭ್ಯಾಸವಾಗಿತ್ತು. ಚಿತ್ರಶಾಲೆ ತೆರೆದಮೇಲೆ ಮಾತ್ರ ಒಬ್ಬ ಅಡಿಗೆಯಾಕೆಯನ್ನು ಅಡಿಗೆಗೆ ಇಟ್ಟುಕೊಂಡಿದ್ದ. ಮಧ್ಯೇ ಮಧ್ಯೇ ಅವರೂ ಬರುತ್ತಿರಲಿಲ್ಲ. ಆಗ ಅವನೇ ಅಡಿಗೆ ಮಾಡಿಕೊಳ್ಳುತ್ತಿದ್ದ. ಇಂದೂ ಶ್ರೀಕಾಂತನೇ ಒಲೆಹೊತ್ತಿಸಿ ಅಡಿಗೆಗಿಟ್ಟು, ತನ್ನ ಸ್ನಾನವಾದಮೇಲೆ, ಲಕ್ಷ್ಮಿಗೆ ಸ್ನಾನಮಾಡು ಎಂದ. ಒಂದು ಸೋಪು ಕೊಟ್ಟು ಅದನ್ನು ಉಪಯೋಗಿಸುವ ವಿಧಾನ ಹೇಳಿಕೊಟ್ಟ; ಸ್ನಾನವಾದ ಮೇಲೆ ತಲೆಗೆ ಎಣ್ಣೆ ಹಾಕಿಕೊಂಡು ಬಾಚಿಕೊಳ್ಳುವಂತೆ ಹೇಳಿದ; ಒಂದು ಕನ್ನಡಿ ಕೊಟ್ಟು ಕನ್ನಡಿಯ ಉಪಯೋಗ ತಿಳಿಸಿದ; ತಂದಿದ್ದ ಸೀರೆ ಕುಪ್ಪಸಗಳನ್ನು ಕೊಟ್ಟ. ಇವೆಲ್ಲವನ್ನೂ ಕಂಡು ಲಕ್ಷ್ಮಿ ಬೆರಗಾದಳು. "ಅಮ್ಮಾವ್ರು ಸುಮ್ಮನಿರುತಾರೆಯೆ ಬುದ್ಧಿ?" ಎಂದಳು. "ಅಮ್ಮಾವ್ರಿಲ್ಲ, ನೀನು ಸುಮ್ಮನೆ ಹೋಗಿ ಸ್ನಾನಮಾಡಿ ಸೀರೆ ಉಟ್ಟುಕೊ" ಎಂದ. ಲಕ್ಷ್ಮಿ ಮಾತಾಡದೆ ಸ್ನಾನದ ಮನೆಗೆ ಹೋದಳು.

ಲಕ್ಷ್ಮಿ ಸ್ನಾನಕ್ಕೆ ಹೋದಾಗ ಶ್ರೀಕಾಂತ ಅಡಿಗೆಯ ಒಲೆಯ ಮುಂದೆ ಕುಳಿತಿದ್ದ. ಲಕ್ಷ್ಮಿಯನ್ನು ಹೇಗೆ ಸುಸಂಸ್ಕೃತಳಾದ ವ್ಯಕ್ತಿಯಾಗಿ ಮಾಡುವುದು ಎಂಬುದನ್ನು ಕುರಿತು ಯೋಚಿಸುತ್ತಿದ್ದ. ತಾನು ಯಾವ ಒಂದು ಸ್ವರೂಪವನ್ನು ರತಿಯ ಸ್ವರೂಪವಾಗಿರಬೇಕೆಂದು ಮನಸ್ಸಿನಲ್ಲಿ ಅಸ್ಫುಟವಾಗಿ ಕಲ್ಪಿಸಿಕೊಂಡಿದ್ದನೋ ಅದು ಇಂದು ಸ್ಫುಟವಾಗಿ ಲಕ್ಷ್ಮಿಯ ಸ್ವರೂಪದಲ್ಲಿ ಮೂರ್ತಿಮತ್ತಾಗಿ ವ್ಯಕ್ತಗೊಂಡು ಗೋಚರವಾಯಿತವನಿಗೆ. ತಬ್ಬಲಿಯಾದ ಆ ಹೆಣ್ಣು ಒಂದು ತಿಂಗಳು ತನ್ನ ಆರಯ್ಕೆಯಲ್ಲಿದ್ದರೆ ಸಾಕು: ಅವಳ ಕೃಶತೆ ಮಲಿನತೆಗಳು ತೊಲಗಿ ಅವಳ ದೇಹಕ್ಕೆ ಒಂದು ಸೊಂಪು ಬರುತ್ತದೆ, ಮುಖದಲ್ಲಿ ಒಂದು ಕಾಂತಿ ಮೂಡುತ್ತದೆ, ಒಟ್ಟು ಸ್ವರೂಪಕ್ಕೆ ಒಂದು ವಿಶಿಷ್ಟ ಆಕೃತಿ ಬರುತ್ತದೆ. ಇಂದು ಅವಳ ಚೆಲುವು ಹುದುಗಿಕೊಂಡಿದೆ! ಅಂದು ಅದು ಪ್ರಕಾಶಕ್ಕೆ ಬರುತ್ತದೆ. ಅವಳನ್ನು ಇಷ್ಟು ಮಟ್ಟಿಗೆ ಸುಂದರಮೂರ್ತಿಯಾಗಿ ಮಾಡುವುದು ಕಷ್ಟದ ಕೆಲಸವೇನೂ ಅಲ್ಲ. ಆದರೆ ಲಕ್ಷ್ಮಿಯ ಮನಸ್ಸು ಇದಕ್ಕೆ ಒಪ್ಪಬೇಕು: ಅವಳಿಗೆ-'ನೀನು ಕೆಲಸದ ತೊತ್ತಲ್ಲ. ನೀನು ಮನೆಯ ಒಡತಿ ಹೇಗೋ ಹಾಗೆ ಇರಬಹುದು. ಇಷ್ಟ ಬಂದಂತೆ ಕೆಲಸ ಮಾಡಬಹುದು. ಇನ್ನೊಬ್ಬಳು ಕೆಲಸದವಳನ್ನೇ ಬೇಕಾದರೆ

ಇಟ್ಟರಾಯಿತು'—ಹೀಗೆಂದು ಹೇಳಿ ಅವಳನ್ನು ಒಪ್ಪಿಸಬೇಕು ಎಂದು ನಿರ್ಧರಿಸಿದ.

ಶ್ರೀಕಂಠನ ಅಡಿಗೆ ಆರಂಭವಾಗಿತ್ತು: ಅಷ್ಟುಹೊತ್ತಿಗೆ ಲಕ್ಷ್ಮಿ ತನ್ನ ಸ್ನಾನ ಮುಗಿಸಿಕೊಂಡು, ತಲೆ ಬಾಚಿಕೊಂಡು, ಹೆರಳು ಹಾಕಿಕೊಳ್ಳಲು ಬಾರದಿದ್ದುದರಿಂದ ಒರಟೊರಟಾಗಿ ಒಂದು ತುರುಬು ಹಾಕಿಕೊಂಡು, ಅಂದ ಪಾದ ಸೀರೆಯನ್ನು ಹೇಗೆಹೇಗೋ ಸುತ್ತಿಕೊಂಡು, ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಿದ್ದಳು. ಇದುವರೆಗೆ ಅವಳು ಕನ್ನಡಿಯಲ್ಲಿ ಮುಖ ನೋಡಿಕೊಂಡಿರಲಿಲ್ಲ, ಪಾಪ. ತನ್ನ ಮುಖವೇ ಅದು? ಮುಖ ಮುಟ್ಟಿ ನೋಡಿಕೊಂಡಳು; ಕನ್ನಡಿಯಲ್ಲಿ ಕೈಗಳು ಮುಖ ಮುಟ್ಟಿದುವು. ಹೌದು, ತನ್ನ ಮುಖವೇ ಅದು! ಸಂದೇಹವಿಲ್ಲ. ಮುಖವೇನೋ ತನ್ನದೆ; ತಾನು ತಾನೆ. ಆದರೆ ಉಡುಪು ತನ್ನದಲ್ಲ; ಮನೆ ತನ್ನದಲ್ಲ. ಏನೋ ಒಂದು ವಿಚಿತ್ರ ಘಟನೆ ನಡೆದಿದೆ. ಹೇಳದೆ ಕೇಳದೆ ಓಡಿಹೋಗೋಣವೇ ಎನ್ನಿಸಿತು ಅವಳಿಗೆ. ಓಡಿಹೋದರೆ ಮತ್ತೆ ತಿರುಕಿಯಾಗಿಯೇ ಇರಬೇಕು. ಏಕೆ ಓಡಿಹೋಗಬೇಕು? ತಿರುಕಿ ಎಂದು ತನ್ನನ್ನು ಇಷ್ಟು ಕರುಣೆಯಿಂದ ನೋಡಿಕೊಳ್ಳುತ್ತಿದ್ದಾರೆ. ಬಟ್ಟೆ ಇಲ್ಲದಿದ್ದುದರಿಂದ ಬಟ್ಟೆ ತೆಗೆಸುಕೊಟ್ಟಿ ದ್ದಾರೆ. ತನ್ನ ಕೊಳಕು ಅವರಿಗೆ ಅಸಹ್ಯವಾಗಿರಬೇಕು. ಆದ್ದರಿಂದ ಶುಭ್ರ ವಾಗಿರುವಂತೆ ಹೇಳಿದ್ದಾರೆ. ಶುಭ್ರವಾಗಿರುವುದರಲ್ಲಿ ತೊಂದರೆಯೇನು? ಇನ್ನುಮೇಲೆ ಪ್ರತಿನಿತ್ಯ ಹೀಗೆಯೇ ಸ್ನಾನಮಾಡಿ ತಲೆಬಾಚಿಕೊಂಡು ಚೊಕ್ಕಟಶುಭ್ರವಾಗಿದ್ದರೆ ಹೊಸ ಧಣಿಗೆ ಮೆಚ್ಚಾಗಬಹುದು, ಸಂತೋಷ ವಾಗಬಹುದು. ಮನೆಗೆಲಸವನ್ನಾದರೂ ಅಷ್ಟೆ, ಧಣಿಗೆ ಸಂತೋಷವಾಗುವ ಹಾಗೆ ಮಾಡಬೇಕು. ದೇವರೇ ತನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿ ದ್ದಾನೆ. ಇನ್ನೊಂದು ಸಲ ಓಡಿಹೋಗುವ ಕಲ್ಪನೆಯನ್ನೂ ಮಾಡಬಾರದು. —ಈ ಬಗೆಯ ಆಲೋಚನಾಪರಂಪರೆ ಲಕ್ಷ್ಮಿಯ ಮನಸ್ಸಿನಲ್ಲಿ ಆಗ ಸುಳಿದಾಡುತ್ತಿತ್ತು.

ಶ್ರೀಕಾಂತ ಅಡಿಗೆ ಮುಗಿಸಿ ಹೊರಕ್ಕೆ ಬಂದ. ಲಕ್ಷ್ಮಿ ಚಿತ್ರಗಳನ್ನು ನೋಡುತ್ತ ನಿಂತಿದ್ದಳು. "ಯಾರು?" ಎಂಬ ಮಾತು ಅವನ ನಾಲಗೆಯ ಮೇಲೆ ಬಂದಿತ್ತು; ಕೂಡಲೆ, ಲಕ್ಷ್ಮಿ ಎಂದು ತಿಳಿದು, ತನಗೆ ತಾನೇ ನಕ್ಕ.

ಸ್ವಲ್ಪಮಟ್ಟಿಗೆ ವೇಷಬದಲಾವಣೆ ಮತ್ತು ಅಲಂಕಾರಗಳು-ಇವು ಲಕ್ಷ್ಮಿಯಲ್ಲಿ ಎಂಥ ಮಾರ್ಪಾಟು ಮಾಡಿವೆ! ಆಗಲೇ ಹೊಸ ಹೆಣ್ಣಾಗಿ ಕಾಣುತ್ತಿದ್ದಾಳೆ. ಈಗ ಅವಳು ತಿರುಕಿಯಂತೆ ಕಾಣುತ್ತಿಲ್ಲ ತಿರುಕಿ ಲಕ್ಷ್ಮಿ ಇನ್ನು ಸತ್ತುಹೋದಳು. ಹೆಚ್ಚಿನ ಅಲಂಕಾರಮಾಡಿಕೊಂಡು, ಚೆನ್ನಾಗಿ ಸೀರೆ ಉಟ್ಟುಕೊಂಡರೆ ಶ್ರೀಮಂತರ ಮನೆಯ ಹೆಣ್ಣನ್ನು ಹೊಡೆದು ನೆಟ್ಟುವಂತಿದ್ದಾಳೆ ಇಂಥ ಹೆಣ್ಣಿಗಾಗಿ ಊರೂರು ಅಲೆದದ್ದಾಯಿತು. ಈಗ ಮನೆಯ ಬಾಗಿಲಿಗೇ ಬಂದಿದ್ದಾಳೆ: ಅರಸುವ ಬಳ್ಳಿ ಕಾಲಿಗೆ ತೊಡರಿದಂತೆ! ವಿಧಿಯ ವ್ಯಾಪಾರವೇ ಹೀಗೆ!—ಎಂದು ಶ್ರೀಕಾಂತ ಆಶ್ಚರ್ಯ ಸಂತೋಷಗಳಿಂದ ಲಕ್ಷ್ಮಿಯನ್ನು ಎವೆಯಿಕ್ಕದೆ ನೋಡುತ್ತಿದ್ದ ಕೆಲ ಕಾಲ.

"ಲಕ್ಷ್ಮೀ, ಊಟಕ್ಕೇಳು" ಎಂದ ಶ್ರೀಕಾಂತ ಲಕ್ಷ್ಮಿ ಬೆಚ್ಚಿಬಿದ್ದಳು. ತಾನು ಹುಟ್ಟಿದಂದಿನಿಂದ ಕೇಳದಿದ್ದ ಉಪಚಾರೋಕ್ತಿಗಳನ್ನು ಕೇಳಿ. ಇಲ್ಲಿ ಹೇಗೆ ನಡೆದುಕೊಳ್ಳಬೇಕು, ತಾನು ಯಾವ ರೀತಿ ಧಣಿಗೆ ಮರ್ಯಾದೆ ತೋರಿಸಬೇಕು, ತನ್ನ ಸ್ಥಾನವೇನು-ಇವೇ ಮೊದಲಾದ ಅಂಶಗಳನ್ನು ಅವಳು ವಿಚಾರಮಾಡಿರಲಿಲ್ಲವಾಗಿ, ಅಷ್ಟೊಂದು ವಿಚಾರಮಾಡುವಷ್ಟು ಕಾಲಾವಕಾಶವೂ ಇರಲಿಲ್ಲವಾಗಿ, ಧಣಿ ಹೇಗೆಹೇಳಿದರೆ ಹಾಗೆ ಕೇಳುವುದೆಂದು ನಿರ್ಧರಿಸಿಬಿಟ್ಟಿದ್ದಳು. ಈಗಲೂ ಹಾಗೆಯೇ ಮಾಡಿದಳು.

ಆದರೆ, ಎದ್ದು ನಿಂತಿದ್ದವಳು ಹಾಗೆಯೇ ನಿಂತಿದ್ದಳು.

"ಏಕೆ ನಿಂತಿದ್ದೀಯಲ್ಲ? ಒಳಕ್ಕೆ ಬಾ, ಊಟ ಮಾಡೋಣ" ಎಂದ ಶ್ರೀಕಾಂತ.

ಇದೇನು ವಿಚಿತ್ರ! ಈ ಹಿಂದೆ ಯಾರಾದರೂ ಕರೆದು ದೂರ ನಿಲ್ಲಿಸಿ ತಂಗುಳುಬೆಂಗುಳು ಹಾಕುತ್ತಿದ್ದರು. ಯಾರೂ ಎಂದೂ ಜಗಲಿಯ ಮೇಲಕ್ಕೆ ಸಹ ಕರೆದು ಅನ್ನ ಹಾಕಿರಲಿಲ್ಲ. ಒಂದೆರಡು ಸಲ ಕೊಟ್ಟಿದ್ದ ಅನ್ನವನ್ನು ಕೊಟ್ಟವರ ಮನೆಯ ಜಗಲಿಯ ಮೇಲೆಯೇ ಕುಳಿತು ಊಟಮಾಡ ಹೋದಾಗ-'ಸಾರಿಸಿ ರಂಗೋಲಿ ಇಕ್ಕಿದ ಜಗಲಿ ಹಾಳುಮಾಡಬೇಡ. ಎಲ್ಲಾದರೂ ಮರದ ಕೆಳಗೆ ತಿನ್ನು'—ಎಂದು ಜನರು ಗದರಿಸಿಕೊಂಡದ್ದು ಅವಳ ನೆನಪಿಗೆ ಬಂತು. ಇದೇನು ವಿಚಿತ್ರ! ಈ ಮಹಾರಾಯ ಒಳಕ್ಕೆ, ಅದರಲ್ಲೂ ಅಡಿಗೆಮನೆಗೆ, ಕರೆದುಕೊಂಡುಹೋಗಿ ಬಡಿಸಲಿದ್ದಾನೆ!—ಎಂದು

ಅವಳಿಗೆ ಅತ್ಯಾಶ್ಚರ್ಯವಾಯಿತು. ಇವನಿಗೆ ಎಲ್ಲೋ ಹುಚ್ಚಿರಬೇಕು; ಇಲ್ಲದಿದ್ದರೆ ತಾನು ಕನಸಿನ ಪ್ರಪಂಚದಲ್ಲಿ ಇರಬೇಕು-ಎಂದೆನಿಸಿತು ಅವಳಿಗೆ. ಆದರೆ, ಮೊದಲೇ ಹೇಳಿದಂತೆ, ಅವಳು ಯಾವ ನಿರ್ಧಾರಕ್ಕೂ ಬರಲು ಅಶಕ್ತಳಾಗಿದ್ದುದರಿಂದ ಶ್ರೀಕಾಂತನ ನೆರಳಿನಂತೆ ಅವನ ಹಿಂದೆ ಹೋದಳು.

೬

ಹೀಗೆಯೇ ಹಲವು ದಿನ ಕಳೆಯಿತು; ತಿಂಗಳುಗಳೂ ಕಳೆದುವು. ಶ್ರೀಕಾಂತ ಚಿತ್ರಗಿತ್ರನೆಲ್ಲವನ್ನೂ ಮರೆತ. ಯಾವ ವಿಚಾರವಾಗಿಯೂ ಯೋಚನೆ ಮಾಡುತ್ತಿರಲಿಲ್ಲ. ಹಗಲಿನಲ್ಲಿ ಅವನು ಮಾಡುವ ಪ್ರತಿಯೊಂದು ಕೆಲಸ ಕಾರ್ಯವೂ, ಆಡುವ ಪ್ರತಿಯೊಂದು ಮಾತೂ, ಬಗೆಯುವ ಪ್ರತಿಯೊಂದು ಆಲೋಚನೆಯೂ-ಎಲ್ಲವೂ ಲಕ್ಷ್ಮಿಯನ್ನು ಬಳಸಿತ್ತು, ಅವಳನ್ನು ತನ್ನ ಇಷ್ಟದಂತೆ ತಿದ್ದುವ ಕಾರ್ಯದಲ್ಲಿ ತೊಡಗಿತ್ತು. ರಾತ್ರಿಯಲ್ಲಿ, ನಿದ್ರೆ ಬರುವ ಮುನ್ನ ಅವನ ಮನಸ್ಸಿನಲ್ಲಿ, ನಿದ್ರೆ ಬಂದ ಬಳಿಕ ಅವನ ಕನಸಿನಲ್ಲಿ, ಅವಳು ಅವನ ಇಷ್ಟಮೂರ್ತಿಯಾಗಿ, ಅವನ ಆದರ್ಶ ಸ್ತ್ರೀವ್ಯಕ್ತಿಯಾಗಿ, ಅವನ ಮನೋರಥ ರತಿಯಾಗಿ, ಅವನ ಜೀವನ್ನಿನಲ್ಲಿ ಅಂತರ್ಗತವಾಗಿರುತ್ತಿದ್ದಳು. ಬೆಳಗಾಗ ಎದ್ದ ಕೂಡಲೆ ಅವನ ಕನಸಿನ ಮೂರ್ತಿ ಮಾಯವಾಗಿ ನಿಜವಾದ ಲಕ್ಷ್ಮಿ ಕಣ್ಣೆದುರು ಕಾಣಿಸಿಕೊಂಡಾಗ ಅವನಿಗೆ ಕೊಂಚ ನಿರಾಶೆಯಾಗುತ್ತಿತ್ತು. ಲಕ್ಷ್ಮಿ ತನ್ನ ಆದರ್ಶದ ಮಟ್ಟಕ್ಕೆ ಇನ್ನೂ ಏರಿಲ್ಲ; ಅವಳು ಇನ್ನೂ ರತಿಯಾಗಿಲ್ಲ. ಅವಳ ಒರಟುತನ ಈಗ ಎಷ್ಟೋ ಮಾಯವಾಗಿದೆ: ನಡೆಯಲ್ಲಿ, ನುಡಿಯಲ್ಲಿ, ನಯ ತೋರಿಬರುತ್ತಿದೆ. ಆದರೆ ಅದು ಇನ್ನೂ ಸಾಲದು. ಮನೆಗೆಲಸದ ಬಹುಪಾಲನ್ನು ತಾನೇ ನಿರ್ವಹಿಸಿಕೊಳ್ಳುತ್ತಿದ್ದಾಳೆ. ಕಾಫಿ ತಿಂಡಿ ಚೆನ್ನಾಗಿ ಮಾಡುವುದನ್ನು ಕಲಿತಿದ್ದಾಳೆ. ಸಂಜೆಯ ಹೊತ್ತು ಹೂಗಿಡಗಳಿಗೆ ನೀರು ಹಾಕುತ್ತಿದ್ದಾಳೆ. ಇನ್ನು ಸ್ವಲ್ಪ ದಿನ ಹೋದರೆ ಅಡಿಗೆಮಾಡುವುದನ್ನೂ ಕಲಿಸಬಹುದು. ಅವಳು ನಿಜವಾಗಿಯೂ ಜಾಣೆ. ಸೂಕ್ಷ್ಮಬುದ್ಧಿ ಇದೆ; ಗ್ರಹಣಶಕ್ತಿ ಇದೆ. ಅವಳ ರೂಪವನ್ನು ತಿದ್ದಿಯಾಯಿತು. ಇನ್ನು ಅವಳ ಮನಸ್ಸನ್ನು ತಿದ್ದಬೇಕು. ಅವಳಿಗೆ ಓದು

ಬರಹ ಕಲಿಸಬೇಕು; ತಿಳಿವಳಿಕೆ ಕೊಡಬೇಕು. ಅವಳಿಗೆ ಕಲೆಗಳಲ್ಲಿ ಅಭಿರುಚಿ ಹುಟ್ಟಿಸಬೇಕು; ಸಂಗೀತ ಹೇಳಿಸಬೇಕು. ಇಷ್ಟು ಮಾಡಬೇಕಾದರೆ ಅವಳಿಗೆ ಹೆಚ್ಚು ಬಿಡುವು ಕೊಡಬೇಕು. ವಿದ್ಯಾಶಿಕ್ಷಣಕ್ಕೆ ಒಬ್ಬ ಗುರುವನ್ನು ನೇಮಿಸಬೇಕು; ಸಂಗೀತ ಶಿಕ್ಷಣಕ್ಕೆ ಒಬ್ಬ ಗುರುವನ್ನು ನೇಮಿಸಬೇಕು. ಒಬ್ಬ ಅಡಿಗೆಯವಳನ್ನು ನೇಮಿಸಿ ಅಡಿಗೆ ಕಲಿಸಬೇಕು. ಇದಕ್ಕೆಲ್ಲ ಬಹು ಹಣ ವೆಚ್ಚವಾಗುತ್ತದೆ. ಆದರೆ ಆಗಲಿ. ತನ್ನಲ್ಲಿ ಇನ್ನೂ ಹಣವಿದೆ. ಸದ್ಯಕ್ಕೆ ಹಣದ ಕೊರತೆಯಿಲ್ಲ. ಆಗ ತನಗೆ ಸ್ವಲ್ಪ ಬಿಡುವಿರುತ್ತದೆ. ತಾನು ಕುಂಚ ಹಿಡಿದು ಬಹುಕಾಲವಾಯಿತು. ಚಿತ್ರ ಕೆಲಸವನ್ನು ಮತ್ತೆ ಪ್ರಾರಂಭ ಮಾಡಿ ಇನ್ನೂ ಸ್ವಲ್ಪ ಹಣ ಗಳಿಸಬಹುದು ಅಷ್ಟುಹೊತ್ತಿಗೆ. ಅವಳನ್ನು 'ತನ್ನ ಆದರ್ಶಕ್ಕೆ ತಂದುಕೊಳ್ಳುವುದಕ್ಕೆ ಇನ್ನೂ ಎರಡು ಮೂರು ವರ್ಷಗಳ ಕಾಲ ಹಿಡಿಯಬಹುದು ; ತನ್ನ ಗುರಿ ಸಾಧಿಸುವುದಾದರೆ ಎಷ್ಟು ಹಣ ವೆಚ್ಚವಾದರೂ ಸರಿಯೆ, ಚಿಂತೆಯಿಲ್ಲ ;' ಎಷ್ಟು ಕಾಲ ಹಿಡಿದರೂ ಸರಿಯೆ, ಕಾದಿರುವುದಕ್ಕೆ ಸಿದ್ಧ. ಅಷ್ಟರಮಟ್ಟಿಗೆ ಆಗಬೇಕಾದರೆ ಇದುವರೆಗೆ ಇದ್ದಂತೆ ತೆರೆಯಮರೆಯಲ್ಲಿ ಇರುವುದು ಸಾಧ್ಯವಿಲ್ಲ; ಗುಪ್ತವಾಗಿ ಸಾಧಿಸುತ್ತಿದ್ದ ಸಾಧನೆ ಬಯಲಾಗಬೇಕಾಗುತ್ತದೆ. ಅದು ಅನಿವಾರ್ಯ.

ಶ್ರೀಕಾಂತ ಬೇಗನೆ ತನ್ನ ಮನೋನಿಶ್ಚಯವನ್ನು ಕಾರ್ಯರೂಪಕ್ಕೆ ತಿರುಗಿಸತೊಡಗಿದ. ಅವಳ ಶಿಕ್ಷಣಕ್ಕೆ ಏರ್ಪಾಡು ಮಾಡಿದ. ಅಡಿಗೆಯವಳನ್ನು ನೇಮಿಸಿಕೊಂಡ. ಈಗ ಲಕ್ಷ್ಮಿ ಮೊದಲಿನಂತೆ ಹೇಳಿದ್ದಕ್ಕೆಲ್ಲ ಹೂಗುಟ್ಟುವ ಹೆಣ್ಣಾಗಿರಲಿಲ್ಲ. "ನನಗೇಕೆ ವಿದ್ಯೆ ? ನನಗೇಕೆ ಸಂಗೀತ ? ನನಗಾಗಿ ಏಕೆ ಇಷ್ಟು ದುಡ್ಡು ಖರ್ಚುಮಾಡುತ್ತೀರಿ ? ನಾನು ಕಾಡುಹಕ್ಕಿಯಂತೆ ಇದ್ದೆ. ನನ್ನನ್ನು ಮತ್ತೆ ಕಾಡಿಗೆ ಬಿಟ್ಟುಬಿಡಿ" ಎಂದು ವಿಧವಿಧವಾಗಿ ಶ್ರೀಕಾಂತನಿಗೆ ಪ್ರಶ್ನೆ ಹಾಕತೊಡಗಿದಳು. ಈ ಪ್ರಶ್ನೆಗಳನ್ನು ಕೇಳಿ ಶ್ರೀಕಾಂತನಿಗೆ ಸಂತೋಷವೇ ಆಯಿತು—ಇಂತಹ ವಿವೇಕದ ಪ್ರಶ್ನೆ ಕೇಳುವ ಮಟ್ಟಿಗೆ ಆಗಲೆ ಅವಳ ಬುದ್ಧಿ ಪ್ರಕಾಶಕ್ಕೆ ಬಂದಿದೆಯಲ್ಲ ಎಂದು.

೭

ಮತ್ತೆ ಕೆಲವು ತಿಂಗಳುಗಳು ಉರುಳಿದುವು; ವರ್ಷ ಒಂದಾಯ್ತು; ಎರಡಾಯ್ತು; ಮೂರಾಯ್ತು. ಈ ಕಾಲದಲ್ಲಿ ಕೆಲವು ಬದಲಾವಣೆಗಳಾಗಿದ್ದುವು. ಬಹು ಮುಖ್ಯವಾದ ಬದಲಾವಣೆ ಏನೆಂಬುದನ್ನು ಬಿಡಿಸಿ ವಿವರಿಸಿ ಹೇಳಬೇಕಾಗಿಲ್ಲ. ಅದು ಲಕ್ಷ್ಮಿಯಲ್ಲಾಗಿದ್ದ ಬದಲಾವಣೆ. ವಜ್ರಕ್ಕೆ ಸಾಣೆ ಹಿಡಿದಂತೆ, ಚಿತ್ರಕ್ಕೆ ಚೌಕಟ್ಟು ಹಾಕಿದಂತೆ, ಲಕ್ಷ್ಮಿಯ ಸಹಜಸೌಂದರ್ಯಕ್ಕೆ ಒಂದು ಬಗೆಯ ಸೊಂಪನ್ನು, ಸಿರಿವಂತಿಕೆಯನ್ನು ತಂದಿದ್ದನು ಶ್ರೀಕಾಂತ. ಇದು ಬಹುಕಾಲ ಹಿಡಿಯಲಿಲ್ಲ. ಆದರೆ ಅವಳ ಮನಸ್ಸನ್ನು ತಿದ್ದಿ, ಅವಳ ಬುದ್ಧಿಯನ್ನು ಸೂಕ್ಷ್ಮಮಾಡಿ, ಅವಳಿಗೆ ತಿಳಿವಳಿಕೆ ಕೊಟ್ಟು, ಅವಳ ಹೃದಯವನ್ನು ಅರಳಿಸುವ ಕೆಲಸ ಬಹು ಕಾಲವೇ ತೆಗೆದುಕೊಂಡಿತು. ಶ್ರೀಕಾಂತ ಬಹಳ ತಾಳ್ಮೆಯಿಂದ ಕಾದಿದ್ದ; ಅವನು ತಾಳ್ಮೆಯ ಪಾಠ ಕಲಿತುದೇ ಆಗ. ಕೊನೆಗೆ ಜಯಶೀಲನಾದ. ತನ್ನ ಶ್ರಮ ಕಡೆಗೆ ಸಾರ್ಥಕವಾಯಿತು ಎಂಬ ಹಿಗ್ಗು ಮೂಡಿತು; ಶ್ರಮ ಸಾರ್ಥಕವಾದ ಭಾವಕ್ಕಿಂತ ಹೆಚ್ಚಾಗಿ ತಾನು ಒಂದು ಹೊಸ ಜೀವಂತವ್ಯಕ್ತಿಯನ್ನೇ ಸೃಷ್ಟಿಮಾಡಿಬಿಟ್ಟಿದ್ದೇನೆಂಬ ಒಂದು ಅಪೂರ್ವ ಆನಂದವುಂಟಾಯಿತು ಅವನಿಗೆ. ಹೌದು; ಒಂದು ಮೂರ್ತಿಯನ್ನು ಸೃಷ್ಟಿಮಾಡಿದ್ದನು ಅವನು. ಲಕ್ಷ್ಮಿ ಅವನಿಗೆ ಚಿನ್ನದ ಸಲಾಕೆಯಂತೆ ದೊರೆತಳು; ಈಗ ಅವಳು ಚಿನ್ನದ ಪುತ್ಥಳಿಯಂತೆ ಇದ್ದಾಳೆ. ಲಕ್ಷ್ಮಿಯನ್ನು ಮೊದಲಿನಿಂದ ನೋಡಿದ್ದವರು ಕೆಲವರು ಹೊರತಾಗಿ ಉಳಿದವರು ಯಾರೂ ಅವಳು ಮೊದಲು ಅಸಂಸ್ಕೃತಳಾದ ತಿರುಕರ ಹುಡಗಿಯಾಗಿದ್ದಳು ಎಂದು ಹೇಳಲು ಬರುವಂತಿರಲಿಲ್ಲ. ನಡೆಯಲ್ಲಿ ನುಡಿಯಲ್ಲಿ, ನಯದಲ್ಲಿ ನೀತಿಯಲ್ಲಿ–ಎಲ್ಲದರಲ್ಲಿಯೂ ಅವಳು ಸುಸಂಸ್ಕೃತಳಾಗಿದ್ದಳು. ಈಗ ಅವಳು ಕಥೆ ಕಾದಂಬರಿಗಳನ್ನು ಓದಿ ಅರ್ಥಮಾಡಿಕೊಳ್ಳಬಲ್ಲವಳಾಗಿದ್ದಳು. ಕಾಡು ಹಕ್ಕಿಯಂತಿದ್ದವಳು ಈಗ ಹಾಡುಹಕ್ಕಿಯಾಗಿದ್ದಳು. ಒಂದು ಮಾತಿನಲ್ಲಿ ಹೇಳುವುದಾದರೆ, ಶ್ರೀಕಾಂತನ ಮನೋಮೂರ್ತಿಯಾದ 'ರತಿ' ಮೈವೆತ್ತು ಮೂಡಿದ್ದಳು.

ಹೌದು ; 'ರತಿ' ಮೈವೆತ್ತು ಮೂಡಿ ಬಂದಿದ್ದಾಳೆ." ಇನ್ನು ರತಿಯ ಚಿತ್ರದ ಹಂಬಲವೇಕೆ ? ಜೀವಂತವ್ಯಕ್ತಿಯ ಮುಂದೆ ಚಿತ್ರದ ನೆರಳೆ ? ರತಿಯ ಚಿತ್ರವನ್ನು ಒಂದುವೇಳೆ ಬರೆದರೂ, ಬರೆದಮೇಲೆ ಲಕ್ಷ್ಮಿಯನ್ನೇನು ಮಾಡು ವುದು ? ಮತ್ತೆ ಮೊದಲಿನಂತೆ ಬೀದಿಗೆ ಬಿಡುವುದೇನು ? ಛೆ ! ಎಂಥ ಘೋರ ಕಲ್ಪನೆ ! ಹೂಗಿಡವನ್ನು ಹುಟ್ಟಿಸಾಕಿ ಅದನ್ನು ಕಿತ್ತು ಬಿಸುಡುವುದೆ ? ಪಾರಿವಾಳವನ್ನು ಸಾಕಿ ಅದನ್ನು ಗಿಡುಗನ ಬಾಯಿಗೆ ಕೊಡುವುದೆ ? ಸುಂದರ ಚಿತ್ರವನ್ನು ಬರೆದು ಅದನ್ನು ಹರಿದು ಹಾಕುವುದೆ ? 'ರತಿ'ಯ ಚಿತ್ರ ಬರೆ ಯಲಿ, ಬರೆಯದೆ ಹೋಗಲಿ, ಲಕ್ಷ್ಮಿ ತನ್ನವಳು.

ಲಕ್ಷ್ಮಿ ತನ್ನವಳು ! ಏನು ? ತನಗೆ ತಿಳಿಯದೆಯೇ ಲಕ್ಷ್ಮಿಯ ವಿಷಯ ದಲ್ಲಿ ಯಾವುದೋ ಕೋಮಲ ಭಾವ ತನ್ನ ಹೃದಯದಲ್ಲಿ ಮೂಡುತ್ತಿದೆ ಆ ಭಾವವನ್ನು ಬೆಳೆಯಬಿಟ್ಟರೆ ತನ್ನ ಮೂಲ ಉದ್ದೇಶಕ್ಕೆ ಭಂಗ ಬರುವುದು ಖಂಡಿತ. ಅದನ್ನು ಮೊಳಕೆಯಲ್ಲೇ ಕಿತ್ತುಹಾಕಬೇಕು. ತನ್ನ ಮೂಲ ಉದ್ದೇಶವನ್ನು ಸಾಧಿಸಲೇಬೇಕು. ಲಕ್ಷ್ಮಿಯ ಚೆಲುವು ಎಷ್ಟು ದಿನ ಬಾಡದೆ ಇದ್ದೀತು ? ತಾನು ಮೊದಲು ಬಗೆದಂತೆ ರತಿಯ ಚಿತ್ರವನ್ನು ಬರೆಯಲೇ ಬೇಕು; ಲಕ್ಷ್ಮಿಯ ಹೊರ–ಒಳಗಿನ ಚೆಲುವನ್ನು, ಅವಳ ಆತ್ಮವನ್ನು, ಚಿತ್ರ ರೂಪದಲ್ಲಿ ಶಾಶ್ವತಗೊಳಿಸಿ ಆವಳನ್ನು 'ಸಾವಿಲ್ಲದ ರತಿ'ಯಾಗಿ ಮಾಡಬೇಕು. ಇನ್ನು ತಡಮಾಡಿ ಪ್ರಯೋಜನವಿಲ್ಲ. ಕಾರ್ಯಾರಂಭಮಾಡಬೇಕು.

ಶ್ರೀಕಾಂತನ ಈ ನಿರ್ಧಾರದ ಫಲವಾಗಿ ಆದದ್ದು ಮತ್ತೊಂದು ಬದಲಾ ವಣೆ : ಅದು ಮನೆಯ ಬದಲಾವಣೆ. ಇಲ್ಲಿ ಲಕ್ಷ್ಮಿಗೆ ಒಬ್ಬಿಬ್ಬರು ಗೆಳತಿಯ ರಾಗಿದ್ದರು. ಮನೆಗೆ ಹೋಗಿ ಬರುವವರೂ ಮತ್ತೆ ಹೆಚ್ಚುತ್ತಿದ್ದರು. ಶಾಂತ ವಾತಾವರಣದಲ್ಲಿ ಕೆಲಸಮಾಡಬೇಕೆಂದು ಉದ್ದೇಶಿಸಿ, ಊರಾಚೆಯ ಹರವಿ ನಲ್ಲಿ ಒಂದು ಮನೆ ಗೊತ್ತುಮಾಡಿದನು. ಆ ಮನೆಗೆ ಹೋದಮೇಲೆ, ತನ್ನ ನಚ್ಚಿನ ತೋಟದ ಮಾಲಿಯೊಬ್ಬನು ಹೊರತು ಮತ್ತೆ ಯಾರನ್ನೂ ಬರಗೊಡ ಲಿಲ್ಲ. ಪಾಠ, ಸಂಗೀತ ಶಿಕ್ಷಕರನ್ನೂ ಅಡಿಗೆಯವಳನ್ನೂ ಬಿಡಿಸಿಬಿಟ್ಟು ಹೋಟೆಲಿನಿಂದ ಊಟ ತರಿಸಿ ಊಟಮಾಡುವುದೆಂದು ನಿಶ್ಚಯಿಸಿದ.

ಲಕ್ಷ್ಮಿಗೆ ಈಗ ತಾನು ಕನಸಿನ ಪ್ರಪಂಚದಲ್ಲಿ ಇರಲಿಲ್ಲವೆಂಬುದು ಸ್ಪಷ್ಟವಾಗಿತ್ತು. ತಾನು ಮೊದಲು ತಿರುಕಿಯಾಗಿದ್ದುದೇ ಈಗ ಅವಳಿಗೆ

ಒಮ್ಮೊಮ್ಮೆ ಕನಸಿನಂತೆ ತೋರುತ್ತಿತ್ತು. ಶ್ರೀಕಾಂತ ತನಗಾಗಿ ಎಷ್ಟೊಂದು ಹಣ ವೆಚ್ಚಮಾಡಿದ್ದಾನೆ, ಎಷ್ಟೊಂದು ಶ್ರಮಪಟ್ಟಿದ್ದಾನೆ! ಏತಕ್ಕಾಗಿ ಹೀಗೆ ಮಾಡುತ್ತಿದ್ದಾನೆ? ಅವನಿಗೆ ಹುಚ್ಚಲ್ಲ; ಅದೂ ಸ್ಪಷ್ಟವಾಗಿತ್ತು. ಏತಕ್ಕೆ ಎಂಬುದು ಮಾತ್ರ ಬಗೆಹರಿಯಲಿಲ್ಲ. ಅವಳ ಬಗೆಹರಿಯದಿದ್ದರೂ ಹೃದಯ ಮಾತ್ರ ಹರಿಯತೊಡಗಿತ್ತು, ಒಂದು ಕಡೆಗೆ: ಶ್ರೀಕಾಂತನ ಹೃದಯದ ಕಡೆಗೆ. ಇನ್ನೂ ಹರಿಯತೊಡಗಿತ್ತು, ಅಷ್ಟೆ. ಶ್ರೀಕಾಂತ ತನಗೆ ಮಾಡಿದ್ದ ಉಪಕಾರ ಕ್ಕಾಗಿ ತಾನು ಏನು ಪ್ರತಿಯಾಗಿ ಕೊಡಬಲ್ಲೆ ಎಂಬ ಒಂದು ಪ್ರಶ್ನೆ ಅವಳಲ್ಲಿ ಮೂಡಿ, 'ಎಂದೆಂದಿಗೂ ಅವನಿಗೆ ಕೃತಜ್ಞಳಾಗಿರಬಲ್ಲೆ' ಎಂದು ಕೊಳ್ಳುತ್ತಿದ್ದಳು. ಕೃತಜ್ಞಳಾಗಿರುವುದು ಮಾತ್ರವಲ್ಲ, ತನ್ನನ್ನು ಶ್ರೀಕಾಂತ ನಿಗೆ ಅರ್ಪಿಸಿಕೊಂಡುಬಿಟ್ಟಿದ್ದೇನೆ ಎಂಬ ಭಾವ ಅವಳಲ್ಲಿ ಮೊಳೆಯುತ್ತಿತ್ತು. ಸಾಕಿದ ನಾಯಿ ಸ್ವಾಮಿಗೆ ಕೃತಜ್ಞನಾಗಿರುವುದು ಮಾತ್ರವಲ್ಲ, ಸ್ವಾಮಿಯನ್ನು ಪ್ರೀತಿಸುತ್ತದೆ; ಸ್ವಾಮಿಗಾಗಿ ಮಡಿಯಲೂ ಸಿದ್ಧ; ಸ್ವಾಮಿ ತನ್ನನ್ನು ಹೊಡೆದರೆ ಬಡಿದರೆ ಅದಕ್ಕೆ ಕೋಪವಿಲ್ಲ; ಅನ್ನ ಹಾಕದೆ ಆಚೆಗೆ ನೂಕಿದರೂ ಸ್ವಾಮಿಯ ಮನೆಬಾಗಿಲು ಬಿಟ್ಟುಹೋಗುವುದಿಲ್ಲ. ಹೀಗೆ ಲಕ್ಷ್ಮಿ ತನ್ನನ್ನು ಸಾಕಿದ ನಾಯಿಗೆ ಹೋಲಿಸಿಕೊಂಡು ಅದರಂತೆ ವರ್ತಿಸುವುದಾಗಿ ಮನಸ್ಸು ಮಾಡಿದಳು. ತಾನು ನಾಯಿ ಮಾತ್ರವಲ್ಲ, ಹೆಣ್ಣು; ತನ್ನ ಹೃದಯ ದಲ್ಲಿ ಮೊಳೆಯುತ್ತಿರುವುದು ಬರಿಯ ಕೃತಜ್ಞತೆಯ ಭಾವವಲ್ಲ, ಪ್ರೇಮಲತೆಯ ಮುಂಗುಡಿ ಎಂಬುದು ಅವಳಿಗೆ ಆಗ ತೋಚದೆಹೋಗಿದ್ದರೆ ಅದು ಸಹಜವೆ!

## ೮

ಶ್ರೀಕಾಂತ ಮಹಡಿಯಮೇಲೆ ಏರ್ಪಡಿಸಿದ್ದ ತನ್ನ ನೂತನ ಚಿತ್ರಶಾಲೆ ಯಲ್ಲಿ ಚಿತ್ರಲೇಖನದ ಸಲಕರಣೆಗಳನ್ನು ಆಗಲೇ ಸಿದ್ಧಪಡಿಸಿಟ್ಟಿದ್ದ. ಒಂದು ದಿನ ಮಧ್ಯಾಹ್ನ ಊಟವಾದಮೇಲೆ ಮರದ ಚೌಕಟ್ಟಿಗೆ ಚಿತ್ರಪಟದ ಬಟ್ಟೆ ಅಳವಡಿಸಿ ಅದನ್ನು ನಿಲವಿನ ಮೇಲೆ ಇರಿಸಿ, ಪಕ್ಕದಲ್ಲಿ ಬಣ್ಣ ಕುಂಚ ಮುಂತಾದ ಸಾಮಗ್ರಿಗಳೆಲ್ಲವನ್ನೂ ಅಣಿಗೊಳಿಸುತಿದ್ದ. ಆ ಹೊತ್ತಿಗೆ ಲಕ್ಷ್ಮಿ

ತಾಂಬೂಲ ತೆಗೆದುಕೊಂಡು ಮೇಲಕ್ಕೆ ಬಂದಳು; ತಾಂಬೂಲದ ತಟ್ಟೆ ಹಿಡಿದು ನಿಂತಿದ್ದಳು.

ಶ್ರೀಕಾಂತ ತನ್ನ ಕೆಲಸದಲ್ಲಿ ಮಗ್ನನಾಗಿದ್ದವನು ಮೊದಲು ಲಕ್ಷ್ಮಿ ಬಂದದ್ದನ್ನು ಗಮನಿಸಿರಲಿಲ್ಲ.

"ತಾಂಬೂಲ" ಎಂದಳು ಲಕ್ಷ್ಮಿ.

"ಅಲ್ಲಿ ಇಡು" ಎಂದ.

ಲಕ್ಷ್ಮಿ ತಾಂಬೂಲವನ್ನು ಒಂದು ಕಾಲುಮಣೆಯ ಮೇಲೆ ಇಟ್ಟು ಹೊರಡುತ್ತಿದ್ದಳು.

"ಲಕ್ಷ್ಮಿ, ನಿಂತುಕೊ. ಸ್ವಲ್ಪ ಕೆಲಸ ಇದೆ" ಎಂದ ಶ್ರೀಕಾಂತ.

ಲಕ್ಷ್ಮಿ ಹಿಂದಿರುಗಿ ಬಂದು ದೂರದಲ್ಲಿ ನಿಂತಳು. ಶ್ರೀಕಾಂತ ತನ್ನ ಕೆಲಸ ನಿಲ್ಲಿಸಿ, ಒಂದು 'ಸೋಫಾ'ದ ಮೇಲೆ ಕುಳಿತುಕೊಂಡ. ಹತ್ತಿರದಲ್ಲೇ ಇದ್ದ ಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಲಕ್ಷ್ಮಿಗೆ ಹೇಳಿದ. ಲಕ್ಷ್ಮಿ ತಾಂಬೂಲ ತೆಗೆದುಕೊಂಡು ಹೋಗಿ ಅಲ್ಲಿ ಕುಳಿತಳು.

ಲಕ್ಷ್ಮಿ ಮಡಿಸಿದ ಎಲೆಯಡಕೆ ಶ್ರೀಕಾಂತನ ಕೈಗೆ ಕೊಡುತ್ತಿದ್ದಳು; ಆವನು ಹಾಕಿಕೊಳ್ಳುತ್ತಿದ್ದ.

"ಇಂದಿನಿಂದ ನೀನು ನನ್ನ ರತಿ" ಎಂದ ಶ್ರೀಕಾಂತ.

ಲಕ್ಷ್ಮಿಗೆ ಸರಿಯಾಗಿ ಅರ್ಥವಾಗಲಿಲ್ಲ : ಆದರೂ ಮನಸ್ಸಿನಲ್ಲಿ ಒಂದು ಅಸ್ಪಷ್ಟ ಸುಖದ ಕಲ್ಪನೆಯಾಗಿ, ಸಂತೋಷವಾಯಿತು.

"ಏನು, ನೀವು ಹೇಳುವುದು ನನಗೆ ಅರ್ಥವಾಗುವುದಿಲ್ಲ" ಎಂದಳು.

"ಹೌದು. ನಿನಗೆ ಅರ್ಥವಾಗುವ ಹಾಗಿಲ್ಲ. ಎಲ್ಲ ಹೇಳುತ್ತೇನೆ ಕೇಳು" ಎಂದು ತನ್ನ ಉದ್ದೇಶವನ್ನು ಮೊದಲಿನಿಂದ ಕೊನೆಯವರೆಗೂ ಆವಳಿಗೆ ತಿಳಿಯುವಂತೆ ವಿವರಿಸಿದ. ಲಕ್ಷ್ಮಿ ಕುತೂಹಲದಿಂದ ಕೇಳುತ್ತಿದ್ದಳು. ಶ್ರೀಕಾಂತ ತನ್ನ ಮಾತನ್ನು ಹೀಗೆ ಕೊನೆಮುಟ್ಟಿಸಿದ : "ಲಕ್ಷ್ಮೀ, ನೀನು ನನ್ನ ರತಿ ಎಂದುದು ಈಗ ಅರ್ಥವಾಯಿತೆ ? ಆ ಚಿತ್ರ ಮುಗಿಯಲು ಎಷ್ಟು ಕಾಲ ಹಿಡಿಯುತ್ತದೆಯೋ ನಾನು ಹೇಳಲಾರೆ. ಅದು ಮುಗಿಯಿತೆಂದರೆ ನನ್ನ ಕಲೆಗೆ ಕಲಶವಿಟ್ಟಂತೆ. ನನಗೆ ದೊರಕುವ ಕೀರ್ತಿಯಲ್ಲಿ ನಿನಗೂ ಭಾಗವಿಲ್ಲದೆ ಹೋಗುವುದಿಲ್ಲ. ನಾವಿಬ್ಬರೂ ನಾಲ್ಕು ವರ್ಷದಿಂದ ಜೊತೆ

ಯಲ್ಲಿದ್ದೇವೆ. ಎಂದೆಂದೂ ಜೊತೆಯಾಗಿರೋಣ. ಆದರೆ ಒಂದಲ್ಲ ಒಂದು ದಿನ ನಾವು ಸಾಯಬೇಕು ಲಕ್ಷ್ಮಿ. ನನ್ನ ಚಿತ್ರ ಮುಗಿದು ನನ್ನ ಕಲೆಯೂ ನಿನ್ನ ಚೆಲುವೂ ಜೊತೆಗೂಡಿ ಮೆರೆಯುತ್ತಿದ್ದರೆ ನಾವು ಎಂದೆಂದೂ ಜೊತೆಗೂಡಿ ಇದ್ದಂತೆ ಆಯಿತಲ್ಲವೇ ? ಆದರೆ ಚಿತ್ರ ಬರೆಯಲು ನಿನ್ನ ನೆರವುಬೇಕು ಲಕ್ಷ್ಮಿ. ನಿನ್ನನ್ನೇ ನಂಬಿ ನೆಚ್ಚಿಕೊಂಡಿದ್ದೇನೆ. ಒಲ್ಲೆ ಎನ್ನಬೇಡ. ನಾನು ನಿನ್ನನ್ನು ಇದುವರೆಗೆ ಕಾಪಾಡಿಕೊಂಡು ಬಂದದ್ದು ದಿಟ. ಆದರೆ ನಿನ್ನ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವುದಕ್ಕೆ ನಾನು ಯಾರು ? ನೀನು ಎಲ್ಲಿಗಾದರೂ ಹೋಗುತ್ತೇನೆ ಎಂದರೂ ನಾನು ಬೇಡ ಎನ್ನಲಾರೆ. ಆದರೆ ನಿನ್ನಲ್ಲಿ ನಂಬಿಕೆ ಇಟ್ಟಿದ್ದೇನೆ ಲಕ್ಷ್ಮಿ. ನನ್ನ ಕೋರಿಕೆ ಸಲ್ಲಿಸು."

"ಚಿತ್ರ ಬರೆಯಲು ಎಂದು ಮೊದಲು ಮಾಡುತ್ತೀರಿ ?" ಎಂದು ಇಷ್ಟೇ ಕೇಳಿದಳು ಅವಳು.

ಶ್ರೀಕಾಂತನಿಗೆ ಪರಮಾನಂದವಾಯಿತು ; ಲಕ್ಷ್ಮಿಯನ್ನು ಬರಸೆಳೆದು ಮುತ್ತಿಡಲೆ ಎನ್ನಿಸಿತು ಅವನಿಗೆ. ಹಾಗೆ ಅನ್ನಿಸಿದ ಕೂಡಲೇ ಅವನ ದೃಢ ಸಂಕಲ್ಪಬುದ್ಧಿ ಅವನ ಹೃದಯಕ್ಕೆ ಅಂಕುಶವಿಟ್ಟಿತು.

"ಇಂದೇ !" ಎಂದು ಅತ್ಯುತ್ಸಾಹದಿಂದ ಶ್ರೀಕಾಂತ ಚಿತ್ರಲೇಖನದ ಪ್ರಾರಂಭೋತ್ಸವಕ್ಕೆ ಸಿದ್ಧನಾದ.

"ಇದೊ, ನಾನು ಚಿತ್ರ ಬರೆಯಲು ಕುಳಿತಿದ್ದೇನೆ. ನೀನು ಸುಮ್ಮನೆ ಎದುರಿಗೆ ಕುಳಿತುಕೊಂಡಿರು ಇವೊತ್ತು. ಹೇಗೆ ಬರೆಯಬೇಕೆಂಬುದನ್ನು ಈ ದಿನ ಗೊತ್ತುಮಾಡಿಕೊಳ್ಳುತ್ತೇನೆ. ನಾಳೆಯಿಂದ ಬೆಳಗ್ಗೆ ಒಂದೆರಡು ಗಂಟೆಯ ಕಾಲ, ಮಧ್ಯಾಹ್ನದ ಮೇಲೆ ಒಂದೆರಡು ಗಂಟೆಯ ಕಾಲ ನಾನು ತೋರಿಸಿಕೊಟ್ಟ ರೀತಿ ನಿಂತಿರಬೇಕು, ಇಲ್ಲವೆ ಕುಳಿತಿರಬೇಕು. ಉಳಿದ ಕಾಲಗಳಲ್ಲಿ ಎಂದಿನಂತೆ, ಓದುವುದು, ಸಂಗೀತ ಅಭ್ಯಾಸ ಮಾಡುವುದು ಇವನ್ನು ಮಾಡಿಕೊ. ಚಿತ್ರ ಬರೆಯುವುದನ್ನು ಬೇಕಾದರೂ ಆಮೇಲೆ ಹೇಳಿಕೊಡುತ್ತೇನೆ–ಈ ಚಿತ್ರ ಮುಗಿದಮೇಲೆ."

ಲಕ್ಷ್ಮಿ ಮರುಮಾತಾಡದೆ ಅವನ ಎದುರಿನಲ್ಲಿ ಒಂದು ಕುರ್ಚಿಯ ಮೇಲೆ ಬಂದು ಕುಳಿತಳು.

ಶ್ರೀಕಾಂತ ಕೆಲಹೊತ್ತು ಲಕ್ಷ್ಮಿಯ ಸುಂದರ ಮುಖವನ್ನೆ ದಿಟ್ಟಿಸಿ ನೋಡುತ್ತಿದ್ದ. ಆಮೇಲೆ ಒಮ್ಮೆ-"ಎಲ್ಲಿ ನಿಂತುಕೊ" ಎಂದ. ಲಕ್ಷ್ಮಿ ನಿಂತಳು. "ಹಾಗಲ್ಲ. ಮೈ ಬಳ್ಳಿಯಂತೆ ಬಳುಕಿರಬೇಕು. ಕೈಗಳು ಹೆಡೆ ಯಾಡುವ ನಾಗರ ಹಾವಿನಂತೆ ಕೊಂಕಿರಬೇಕು. ಮುಖ ಸ್ವಲ್ಪ ಎತ್ತಿರ ಬೇಕು. ತುಟಿಯಲ್ಲಿ ನಗೆಯಿರಬೇಕು" ಎಂದು ಸೂಚನೆಕೊಟ್ಟ. ಲಕ್ಷ್ಮಿ ಅಂತೆಯೇ ನಿಲ್ಲಲು ಪ್ರಯತ್ನಪಟ್ಟಳು. ಆಗಲಿಲ್ಲ. ಶ್ರೀಕಾಂತ ಎದ್ದುಹೋಗಿ ಅವಳ ಗಲ್ಲ ಎತ್ತಿ ಹಿಡಿದ; ಕೈಗಳನ್ನು ಹಿಡಿದು, ಅವನ್ನು ಕೊಂಕಿಸುವುದನ್ನು ತೋರಿಸಿಕೊಟ್ಟ; ನಡುಬಾಗಿಸಿ ಬಳುಕಿಸಲು ಅವಳನ್ನು ತಬ್ಬಿದಂತೆ ಮಾಡಿದ. ಇದೇ ಮೊದಲ ಸಲ ಲಕ್ಷ್ಮಿಯನ್ನು ಶ್ರೀಕಾಂತ ಹೀಗೆ ಸ್ಪರ್ಶಮಾಡಿದ್ದು, ಲಕ್ಷ್ಮಿಯ ಮೈ ರೋಮಾಂಚವಾಯಿತು; ಹೃದಯ ಕಂಪಿಸತೊಡಗಿತು; ಈ ಬಗೆಯ ಅನುಭವವಾದದ್ದು ಅವಳಿಗೆ ಇದೇ ಮೊದಲು. ಅವಳಿಗೆ ಒಂದು ಬಗೆಯ ಅನಿರ್ವಚನೀಯವಾದ ಆನಂದವಾಯಿತು.

ಲಕ್ಷ್ಮಿಯನ್ನು ಈ ಮೊದಲೇ ಪ್ರೇಮಭಾವದಿಂದ ನೋಡಿದ್ದ ಶ್ರೀಕಾಂತನಿಗೆ ಆದ ಅನುಭವವನ್ನಂತೂ ಹೆಚ್ಚು ಹೇಳಬೇಕಾದ ಪ್ರಕೃತವೇ ಇಲ್ಲ. ಲಕ್ಷ್ಮಿ ಯಾರು, ತಾನು ಯಾರು, ತನ್ನ ಉದ್ದೇಶವೇನು, ತಾನು ಒಂದು ಕ್ಷಣ ಹಿಂದೆ ಮಾಡಿದ್ದ ದೃಢಸಂಕಲ್ಪವೇನು-ಎಂಬುದರ ಅರಿವೆಲ್ಲ ಮರೆತುಹೋಗಿ, ಲಕ್ಷ್ಮಿಯನ್ನು ಕೊಂಚ ಬಲವಾಗಿ ತಬ್ಬಿ ಹಿಡಿದ; ಯಾಂತ್ರಿಕವಾಗಿಯೋ ಎಂಬಂತೆ ಲಕ್ಷ್ಮಿ ತನ್ನ ಕೈಯೊಂದನ್ನು ಶ್ರೀಕಾಂತನ ಭುಜದಮೇಲಕ್ಕೆ ಮೆಲ್ಲನೆ ಸರಿಸಿದಳು. ಶ್ರೀಕಾಂತ ಪ್ರತಿಯಾಗಿ ಮೆಲ್ಲನೆ ಅವಳ ತಲೆಯನ್ನು ತನ್ನ ಎಡಗೈಲಿ ಹಿಡಿದುಕೊಂಡ. ಇಬ್ಬರ ದೃಷ್ಟಿಗಳೂ ಸಂಧಿಸಿದುವು. ಲಕ್ಷ್ಮಿಯ ದೃಷ್ಟಿ-"ಶ್ರೀಕಾಂತ, ನಾನೊಂದು ತಬ್ಬಲಿ ಹೆಣ್ಣಾಗಿ ಬಂದೆ. ಈಗಲೂ ತಿರುಕಿಯೆ. ಅಂದು ಕೂಳಿನ ತಿರುಪೆ ಬೇಡಿದೆ. ಇಂದು ಪ್ರೇಮಭಿಕ್ಷೆ ಬೇಡುತ್ತಿದ್ದೇನೆ ನೀಡು; ಇಲ್ಲವೆನ್ನಬೇಡ" ಎಂದು ಕೇಳುವಂತಿತ್ತು. ಶ್ರೀಕಾಂತನ ದೃಷ್ಟಿಯೂ ಆಳವಾಗಿತ್ತು. ಆದರೆ, ಉತ್ಕಟ ಪ್ರೇಮಭಾವದಿಂದಲ್ಲ; ಗಾಢವಾದ ಆಲೋಚನೆಯಿಂದ. ಅವನಲ್ಲಿ ಪ್ರೇಮ ಭಾವ ಇರದೆ ಇರಲಿಲ್ಲ. ಆ ಪ್ರೇಮ ಅವನ ಹೃದಯದಲ್ಲಿ ತಾನೇ ತಾನಾಗಿ ಉಕ್ಕಿ, ಹೊರಹೊಮ್ಮಲು ಅವಕಾಶ ಕಾಣದೆ, ಹೃದಯವನ್ನು ಹಿಂಡುತಿತ್ತು;

ಹೃದಯ ಒಂದೇ ಸಮನೆ ಡವಡವ ಎಂದು ತುಡಿಯುತ್ತಿತ್ತು. ಆದರೆ, ಶ್ರೀಕಾಂತ ತನ್ನ ಸಂಯಮದಿಂದ ಹೃದಯವನ್ನು ಹತೋಟಿಯಲ್ಲಿಟ್ಟು ಕೊಂಡು, ಹೃದಯ ಹೇಳಿದಂತೆ ಕೇಳುವುದೇ ಬಿಡುವುದೇ ಎಂದು ಆಲೋಚಿಸು ತ್ತಿದ್ದ. ಅವನ ದೃಷ್ಟಿಯಲ್ಲಿ ಕಂಡುಬರುತ್ತಿದ್ದುದು ಇದೇ ಆಲೋಚನೆ, ಒಳಗಿನ ಹೋರಾಟದ ಹೊಳಹು. ಆಗ ಅವನ ಮನಸ್ಸಿನಲ್ಲಿ ಒಂದು ದೊಡ್ಡ ಹೋರಾಟವೇ ನಡೆಯುತ್ತಿತ್ತು: ಯಾವುದು ಹೆಚ್ಚು—ಒಲವೊ, ಕಲೆಯೊ ? ಒಲವಿಗೆ ಕಲೆಯನ್ನು ಬಲಿಕೊಡುವುದೆ, ಇಲ್ಲವೆ ಕಲೆಗೆ ಒಲವನ್ನು ಬಲಿ ಕೊಡುವುದೆ? ಲಕ್ಷ್ಮಿ ತನ್ನ ತೋಳಸೆರೆಯಲ್ಲಿದ್ದಾಳೆ, ತಾನು ಅವಳ ತೋಳ ತೆಕ್ಕೆಯಲ್ಲಿದ್ದಾನೆ. ಬಾಯಿ ಬಿಡದಿದ್ದರೂ ಅವಳ ಹೃದಯ ಏನು ಹೇಳು ತ್ತಿದೆ ಎನ್ನುವುದರ ಅರಿವು ತನಗಾಗಿದೆ; ತನ್ನ ಹೃದಯ ಏನು ನುಡಿಯು ತ್ತಿದೆ ಎನ್ನುವುದರ ಅರಿವು ಅವಳಿಗೆ ಆಗಿರಲೇಬೇಕು. “ನಾನು ನಿನ್ನನ್ನು ಪ್ರೀತಿಸುತ್ತೇನೆ. ನೀನು ನನ್ನ ಸರ್ವಸ್ವ” ಎಂದು ಅವಳಿಗೆ ಹೇಳಿಬಿಡುವುದೆ? ಅದು ಸರಿಯಲ್ಲ. ಹಾಗೆ ಹೇಳಿದರೆ ಅದು ಬಾಯಿನ ನುಡಿಗಳು, ಅಷ್ಟೆ. ಹೃದಯದ ಭಾಷೆಯೇ ಬೇರೆ; ಹೃದಯದ ಭಾಷೆ ವರ್ತನೆಯಲ್ಲಿ. ಅವಳನ್ನು ಒಮ್ಮೆ ಚುಂಬಿಸಿದರೆ ಸಾಕು-ಪ್ರೇಮದ ಹೆಬ್ಬಾಗಿಲು ತೆರೆದಂತೆ, ಎರಡು ಸಾಗರಗಳ ನಡುವಣ ಭೂಭಾಗವನ್ನು ಕಡಿದು ಸಾಗರಗಳನ್ನು ಸೇರಿಸಿದಂತೆ. ಹೀಗೆ ಅನ್ನಿಸಿತೋ ಇಲ್ಲವೋ, ಇನ್ನೇನು ಶ್ರೀಕಾಂತನ ತುಟಿ ಲಕ್ಷ್ಮಿಯ ತುಟಿಯನ್ನು ಸೋಕಬೇಕು—ಅಷ್ಟರಲ್ಲಿ, ಕಣ್ಣುಮುಚ್ಚುವ ಹಾಗಾಯಿತು; ಕಣ್ಣು ಮುಚ್ಚಿಕೊಂಡ. ತಾನು ಬರೆಯದೆ ಇಟ್ಟಿದ್ದ ಬರಿಯ ಪಟ ಮನಸ್ಸಿನಲ್ಲಿ ಎದುರಿಗೆ ಕಾಣಿಸಿಕೊಂಡಿತು. ಅದರಲ್ಲಿ ಒಂದು ದಿವ್ಯ ಸುಂದರ ಮೂರ್ತಿ ಮೂಡಿ ನಿಂತಿತು: ಲಕ್ಷ್ಮಿಯ ಪ್ರತಿಬಿಂಬವೇ ! ಆದರೆ ಲಕ್ಷ್ಮಿ ಯಲ್ಲ. ಯಾರು ? ಯಾರದು ? ರತಿ: ಲಕ್ಷ್ಮಿಗಿಂತ ಮೊದಲೇ ತನ್ನ ಹೃದಯವನ್ನು ಆಕ್ರಮಿಸಿಕೊಂಡಿದ್ದ ರತಿ. ರತಿ ಗಹಗಹಿಸಿ ನಗತೊಡಗಿದಳು; ಅವಳ ನಗೆಯಲ್ಲಿ ಮೂದಲಿಕೆ, ಹಾಸ್ಯ, ತಿರಸ್ಕಾರ ಎಲ್ಲ ಬೆರೆತಿದ್ದುವು. ಆ ರತಿ ಒಮ್ಮೆ ಪಟದಮೇಲೆ ನರ್ತಿಸುವಳು, ಒಮ್ಮೆ ತನ್ನ ಹೃದಯದಲ್ಲಿ ನರ್ತಿ ಸುವಳು. ‘ನನ್ನ ಹೃದಯದಲ್ಲಿ ನಿನಗೆ ಸ್ಥಾನವಿಲ್ಲ; ನಡೆ’ ಎಂದರೆ ಕೇಳು ವಂತಿರಲಿಲ್ಲ. ‘ರತಿ’ಯನ್ನು ಚಿತ್ರಬಂಧನದಲ್ಲಿ ಸೆರೆಹಾಕುವವರೆಗೂ ‘ರತಿ’

ತನ್ನ ಹೃದಯವನ್ನು ಬಿಟ್ಟುಹೋಗುವಂತಿರಲಿಲ್ಲ; ಅಲ್ಲಿಯವರೆಗೂ ಲಕ್ಷ್ಮಿಗೆ ತನ್ನ ಹೃದಯದಲ್ಲಿ ಸ್ಥಾನವಿಲ್ಲ.

ಶ್ರೀಕಾಂತನ ಒಳಗಿನ ಈ ಹೋರಾಟದಿಂದ ತಾತ್ಕಾಲಿಕವಾಗಿ ಹೊರಟ ನಿರ್ಣಯ ಬಹು ಕ್ರೂರವಾದ ರೀತಿಯಲ್ಲಿ ವ್ಯಕ್ತಗೊಂಡಿತು: ಲಕ್ಷ್ಮಿ ತನ್ನ ಭುಜದಮೇಲೆ ಹಾಕಿದ್ದ ಕೈಯನ್ನು ತಟ್ಟನೆ ತೆಗೆದು ಕೊಡವಿದ; ತಬ್ಬಿ ಹಿಡಿದಿದ್ದ ತನ್ನ ಕೈಯನ್ನು ಬಿಟ್ಟ. ಶ್ರೀಕಾಂತನನ್ನೆ ನೆಮ್ಮಿ ನಿಂತಿದ್ದ ಲಕ್ಷ್ಮಿ ಆಸರೆ ತಪ್ಪಿದಂತಾಗಿ ಕೆಳಕ್ಕೆ ಕುಕ್ಕರಿಸಿ ಬಿದ್ದಳು. ಅವಳ ದೇಹಕ್ಕೆ ಪೆಟ್ಟಾಗಲಿಲ್ಲ; ಹೃದಯಕ್ಕೆ, ಮನಸ್ಸಿಗೆ, ದೊಡ್ಡ ಪೆಟ್ಟು ತಗುಲಿತು.

ಶ್ರೀಕಾಂತನಿಗೆ ತನ್ನ ವರ್ತನೆ ಬಿರುಸಾಗಿದೆಯೆಂದು ತೋರದೆ ಇರಲಿಲ್ಲ. ತಾನು ಹೀಗೆ ವರ್ತಿಸಬಾರದಾಗಿತ್ತು ಎಂದುಕೊಂಡ. ಅಲ್ಲದೆ, ತಾನು ಉದ್ದೇಶಪೂರ್ವಕವಾಗಿ ಅಲ್ಲದೆ ಹೋದರೂ ಯಾವುದೋ ಒಂದು ಪ್ರೇರಣೆಗೆ ಒಳಗಾಗಿ ಹೀಗೆ ಮಾಡಿದನೆಂಬುದು ಲಕ್ಷ್ಮಿಗೆ ಹೊಳೆದು ಆ ಭಾವ ಅವಳ ಮನಸ್ಸಿನಲ್ಲಿ ಖಚಿತಗೊಂಡರೆ, ತನ್ನ ಉದ್ದೇಶವೇ ಭಂಗವಾಗುತ್ತದೆ; ಅವಳು ಪ್ರಸನ್ನಳಾಗಿಲ್ಲದಿದ್ದರೆ ತಾನು ಚಿತ್ರಕೆಲಸಕ್ಕೆ ಕೈಯಿಕ್ಕುವುದೆಂತು?

ಶ್ರೀಕಾಂತ ಲಕ್ಷ್ಮಿಯ ಕೈಹಿಡಿದು ಮೇಲಕ್ಕೆ ಎಬ್ಬಿಸಹೋದ: ಅಷ್ಟರಲ್ಲಿ ಅವಳೇ ಎದ್ದಿದ್ದಳು.

"ಲಕ್ಷ್ಮೀ, ಪೆಟ್ಟಾಯಿತೇನು? ಅಯ್ಯೋ, ನೀನು ಹಾಗೆ ಬೀಳುತ್ತಿ ಎಂದು ತಿಳಿದಿದ್ದರೆ ನಾನು ಅಷ್ಟು ಸರಕ್ಕನೆ ಕೈಬಿಡುತ್ತಿರಲಿಲ್ಲ. ನಿನಗೆ ಯಾವ ನಿಲವು ಕೊಡುವುದು ಎಂದು ಮನಸ್ಸಿನಲ್ಲಿಯೆ ಯೋಚಿಸುತ್ತಿದೆ. ಯಾವುದೊ ಯೋಚನೆಯಲ್ಲಿ ನನಗೆ ತಿಳಿಯದಂತೆಯೆ ಕೈಬಿಟ್ಟುಬಿಟ್ಟೆ. ನಿನ್ನ ಕಾಲಿನಲ್ಲಿ ಬಲವೇ ಇಲ್ಲ. ಇನ್ನು ಗಂಟೆಗಟ್ಟಲೆ ಹೇಗೆ ನಿಂತಿರುತ್ತಿ?"

"ಎಷ್ಟಾಗಲಿ ತಿರುಕಿಯಾಗಿದ್ದವಳಲ್ಲವೆ ನಾನು. ತಿರುಗಿ ತಿರುಗಿ ಕಾಲು ಗಟ್ಟಿಯಾಗಿವೆ; ಗಟ್ಟಿಯಾಗಿಲ್ಲದೆ ಏನು. ಗಂಟೆಗಟ್ಟಲೆಯಲ್ಲ, ದಿನಗಟ್ಟಲೆ ಬೇಕಾದರೂ ನಿಂತಿರುತ್ತೇನೆ. ಇಂದೇ ಚಿತ್ರಕೆಲಸಕ್ಕೆ ಮೊದಲುಮಾಡಬಹುದು ಬೇಕಾದರೆ."

"ಬೇಡ, ನಿನಗೆ ಆಯಾಸವಾಗಿದೆ. ನನಗೂ ಏಕೋ ಸ್ವಲ್ಪ ಆಯಾಸವಾಗಿದೆ. ನಾಳೆ ಮೊದಲು ಮಾಡುತ್ತೇನೆ."

ಅಂದಿನ ರಾತ್ರಿ ಬಹಳಹೊತ್ತು ಶ್ರೀಕಾಂತನಿಗೂ ನಿದ್ರೆಯಿಲ್ಲ,ಲಕ್ಷ್ಮಿಗೂ ನಿದ್ರೆಯಿಲ್ಲ.

ಶ್ರೀಕಾಂತನ ಕಲ್ಪನೆ: ಲಕ್ಷ್ಮಿ ತಪ್ಪುತಿಳಿದುಕೊಂಡಿರಲಾರಳು. ಚಿತ್ರ ಮುಗಿದ ಮೇಲೆ ಲಕ್ಷ್ಮಿಯನ್ನು ತಾನೆಂದೂ ನಿರಾಕರಿಸುವವನಲ್ಲ. ಅಲ್ಲಿಯ ವರೆಗೆ ಮಾತ್ರ ಲಕ್ಷ್ಮಿಯನ್ನು ಮರೆತಿರಬೇಕು. ಅಲ್ಲಿಯವರೆಗೆ ಮಾತ್ರ ಅವಳನ್ನು ತನ್ನ ಚಿತ್ರದ ಮಾದರಿಯಾಗಿ ಪರಿಗಣಿಸಬೇಕು ; ಪ್ರೇಮಮೂರ್ತಿ ಯಾಗಿ ಅಲ್ಲ. ಚಿತ್ರದ ಕೆಲಸವನ್ನು ಮರುದಿನ ಬೆಳಗ್ಗೆಯೇ ಪ್ರಾರಂಭಿಸಬೇಕು. ಚಿತ್ರಕ್ಕೆ ಮನೋಹರವಾದ ಪ್ರಕೃತಿದೃಶ್ಯದ ಹಿನ್ನೆಲೆ ಕೊಡಬೇಕು. ಆಗ ತಾನೆ ಸೂರ್ಯೋದಯವಾಗಿರಬೇಕು. ಸೂರ್ಯದೇವನ ಬರವಿಗೆ ನಾಚಿ ಉಷೆ ಲಜ್ಜೆಯಿಂದ ಹಿಂದಕ್ಕೆ ಸರಿದಂತೆ ಬೆಳಗಿನ ಕೆಂಪು ತಿಳಿಯಾಗಿರಬೇಕು. ಆ ತಿಳಿಗೆಂಪಿನೊಡನೆ 'ಸೂರ್ಯನ ಸ್ವರ್ಣಕಾಂತಿ ಬೆರೆತು ಬಾಂದಳದ ಬಣ್ಣ ಚೆಂಬೊನ್ನಿನ ಚೆಲುವು ಹೊಂದಿರಬೇಕು. ಬಾಂದಳದ ಮುಂದೆ ಸರೋವರ ವಿರಬೇಕು; ಸರೋವರದ ನೀರು ಕನ್ನಡಿಯಂತೆ ನಿಶ್ಚಲವಾಗಿ ಹೊಳೆಯುತ್ತ, ಮೇಲಿನ ರಾಗರಂಜಿತಾಕಾಶವನ್ನು ಪ್ರತಿಬಿಂಬಿಸುತ್ತಿರಬೇಕು ಸರೋವರದಲ್ಲಿ ಕೆಂದಾವರೆ ಅರಳುತ್ತಿರಬೇಕು. ಸರೋವರದ ಮುಂಗಡೆ ಒಂದು ಅಶೋಕವೃಕ್ಷ, ಒಂದು ಹೊಂಗೆಯ ಮರ, ಒಂದು ಮಾವಿನ ಮರ ಇರಬೇಕು; ಅವು, ವಸಂತ ಋತುವಿನ ಹೊಸ ಹೊಗರನ್ನು ಚಿಗುರಿನಲ್ಲಿ ತೋರುವಂತಿರಬೇಕು. ಆಗತಾನೆ ಮೊದಲ ಮಳೆ ಬಿದ್ದಿರುವುದನ್ನು, 'ಹಸುರು ಗರಿಕೆಯಲ್ಲಿ, ,ಅವುಗಳ ನಡುವೆ ಹುಟ್ಟಿರುವ ಕಿರಿಹೂಗಳ ಗಿಡಗಳಲ್ಲಿ ಕಾಣಿಸಬೇಕು. ಗರಿಕೆಯ ತೆನೆ, ಗಿಡದ ಚಿಗುರು-(ನೋಟಕರ) ಎಡಗಡೆಗೆ ತುಸ ಓರೆಯಾಗಿರಬೇಕು: ಮಂದಮಾರುತ ತೆಂಕಣಿಂದ ಬೀಸುತ್ತಿರುವುದರಿಂದ. ಚಿತ್ರವನ್ನು ನೋಡಿದಕೂಡಲೆ, ವಸಂತದ ಮುಂಬೆಳಗಿನ ಅಂದ ಚೆಂದ, ತಂಪು ಇಂಪು—ಎಲ್ಲ! ಇಂದ್ರಿಯವೇದ್ಯವಾಗು ವಂತೆ ಚಿತ್ರಿಸಬೇಕು. ಇದೇ ರತಿದೇವಿಗೆ ತಕ್ಕ ಆವರಣ. ರತಿಯನ್ನು ಸರೋ ವರದ ದಡದಲ್ಲಿ ನಿಲ್ಲಿಸಬೇಕು. ಅವಳು ಬಿಳಿಯ ತೆಳ್ಳನೆಯ ನವಿರು ಸೀರೆ ಯನ್ನು ಮಾತ್ರ ಉಟ್ಟಿರಬೇಕು. ಇನ್ನು ಯಾವ ಒಡವೆಯಲಂಕಾರವೂ

ಬೇಕಿಲ್ಲ. ಅವಳ ನಗ್ನ ಶರೀರ ಬಿಳಿಸೀರೆಯಿಂದ ಮುಚ್ಚಿದ್ದರೂ ಅಸ್ಪಷ್ಟ ಸುಂದರವಾಗಿ ಕಾಣುತ್ತಿರಬೇಕು. ಕೇಶರಾಶಿ ಬಿಚ್ಚಿ ಒಲೆಯುತ್ತಿರಬೇಕು. ಸೀರೆಯ ಸೆರಗೂ ಹಾರುತ್ತಿರಬೇಕು. ರತಿ ತನ್ನ ಸುಂದರ ರೂಪನ್ನು ತಿಳಿನೀರ್ಗನ್ನಡಿಯಲ್ಲಿ ನೋಡಿಕೊಳ್ಳುತ್ತಿರಬೇಕು.....ರತಿಯ ನಿಲವು ಹಾಗಿರಬೇಕು. ನಿನ್ನೆಯೆಲ್ಲ ಇದು ಸ್ಪಷ್ಟವಾಗಲಿಲ್ಲ! ಈಗ ಖಚಿತವಾಗಿದೆ. ಇದನ್ನು ಲಕ್ಷ್ಮಿಗೆ ವಿವರಿಸಿ ಹೇಳಬೇಕು.

ಲಕ್ಷ್ಮಿಯ ಭಾವನೆ: ಶ್ರೀಕಾಂತ ತನ್ನನ್ನು ಒಂದು ಉದ್ದೇಶಕ್ಕಾಗಿ ಸಾಕಿ, ಸಲಹಿ, ತನ್ನನ್ನು ಇಷ್ಟು ಸುಂದರ ವ್ಯಕ್ತಿಯನ್ನಾಗಿ ಮಾಡಿಕೊಂಡಿದ್ದಾನೆ. ತನ್ನನ್ನು ಕಂಡರೆ ಅವನಿಗೆ ಪ್ರೇಮವೇನೂ ಇಲ್ಲ. ಆದರೆ ತನ್ನ ಪ್ರೇಮ ಅವನ ಕಡೆಗೆ ಹರಿದುಹೋಗಿದೆ. ಯಾವ ದೃಷ್ಟಿಯಿಂದ ನೋಡಿದರೂ ಶ್ರೀಕಾಂತ ತನ್ನ ಸ್ವಾಮಿ. ಅವನು ಪ್ರೇಮವನ್ನು ನೀಡಲಿ ನೀಡದಿರಲಿ, ತನ್ನ ಪ್ರೇಮಕ್ಕೆ ಚ್ಯುತಿಯಿರಕೂಡದು. ಅವನು ನಟ್ಟು ಬೆಳಸಿದ ಗಿಡದ ಹೂವು ತನ್ನ ವಿಕಸಿತ ಹೃದಯ. ಅರಳುವುಹು ಅದರ ಧರ್ಮ! ಅದು ಅರಳಿಯಾಯಿತು. ಅದು ಅವನ ಮುಡಿಗಾದರೂ ಸೇರಲಿ, ಅಡಿಯ ಮೇಲಾದರೂ ಬೀಳಲಿ, ಹೇಗೂ ಅದರ ಬಾಳು ಧನ್ಯ. ಇನ್ನು ಮನಸ್ಸನ್ನು ಬಿಗಿಹಿಡಿಯಬೇಕು. ತನ್ನ ಪ್ರೇಮವನ್ನು ವ್ಯಕ್ತಗೊಳಿಸಿ ಅವನ ಕಾರ್ಯಕ್ಕೆ ವಿಘ್ನತರಬಾರದು....ಹೀಗೆ ಸಮಾಧಾನಗೊಂಡ ಲಕ್ಷ್ಮಿಗೆ ಚೆನ್ನಾಗಿಯೇ ನಿದ್ದೆ ಹತ್ತಿತು. ಬೆಳಗಾಗ ಎದ್ದಮೇಲೆ ಹಿಂದಿನ ದಿನದ ಘಟನೆಯ ನೆನಪೂ ಇರಲಿಲ್ಲ. ಹೃದಯಕ್ಕೆ ತಗುಲಿದ್ದ ಗಾಯ ಮಾಗಿತ್ತು. ಆದರೆ ಅವಳಿಗೆ ತಿಳಿಯದಂತೆಯೇ ಅದರ ಕಲೆ ಕೊಂಚಮಾತ್ರ ಉಳಿದುಹೋಗಿತ್ತು.

## ೧೦

ಮಾರನೆಯ ದಿನ ಬೆಳಗ್ಗೆ ಶ್ರೀಕಾಂತ ತನ್ನ ಚಿತ್ರದ ಕಲ್ಪನೆಯನ್ನು ಲಕ್ಷ್ಮಿಗೆ ವಿವರಿಸಿದ. ವಿವರಿಸಿ, ತನ್ನ ಉದ್ದೇಶಸಾಧನೆಯಲ್ಲಿ ಎಲ್ಲ ಕಷ್ಟಗಳನ್ನೂ ಸಹಿಸಿಕೊಂಡು ನೆರವಾಗಬೇಕೆಂದು ಅವಳನ್ನು ನಯನುಡಿಗಳಿಂದ

ಬೇಡಿಕೊಂಡ. ಶ್ರೀಕಾಂತನ ಇಚ್ಛೆಯಂತೆ ನಡೆಯುವುದಾಗಿ ನಿರ್ಧರಿಸಿದ್ದ ಲಕ್ಷ್ಮಿ ಅವನು ಹೇಳಿದ್ದಕ್ಕೆಲ್ಲ ಒಪ್ಪಿದಳು.

ಒಡನೆಯೆ ಚಿತ್ರದ ಕೆಲಸ ಪ್ರಾರಂಭವಾಯ್ತು. ಮೊದಲು ಕಾಗದದ ಮೇಲೆ ಒಂದು ರೇಖಾಚಿತ್ರವನ್ನು ಬರೆದು, ಅದು ಸರಿಯಾಗಿ ಬಂದರೆ ಅದನ್ನು ಪಟ್ಟಕ್ಕೆ ಪಡಿಯಿಳಿಸಿಕೊಂಡು ಬಣ್ಣದ ಕೆಲಸಕ್ಕೆ ಮೊದಲು ಮಾಡುವುದು ಶ್ರೀಕಾಂತನ ಸಾಮಾನ್ಯ ಪದ್ಧತಿಯಾಗಿತ್ತು. ಆದರೆ ಈ ಚಿತ್ರವನ್ನು ಪಟದ ಮೇಲೆಯೇ ಮೊದಲುಮಾಡಿಬಿಟ್ಟ. ಅವನು ಚಿತ್ರ ಹೇಗಿರಬೇಕೆಂಬುದನ್ನು ಬಹಳ ಕಾಲದಿಂದ ಮನನಮಾಡಿದ್ದ ; ಅಲ್ಲದೆ, ಎದುರಿಗೆ ರತಿಯ ಮಾದರಿಯಾದ ಲಕ್ಷ್ಮಿ ಬೇರೆ ಅವನಿಗೆ ಸ್ಫೂರ್ತಿ ಕೊಡುತ್ತಿದ್ದಳು ಹೀಗಾಗಿ, ಚಿತ್ರದ ರೂಪರೇಖೆಗಳನ್ನು ರೂಪಿಸುವುದು ಅವನಿಗೆ ಅಷ್ಟು ಕಷ್ಟವಾಗಿ ತೋರಲಿಲ್ಲ. ಆದರೂ, ತನ್ನ ಮನಸ್ಸಿಗೆ ಒಪ್ಪುವಂತೆ ರೂಪರೇಖೆ ಚಿತ್ರಿಸುವುದಕ್ಕೇ ಹದಿನೈದು ದಿನಗಳ ಮೇಲೆ ಹಿಡಿಯಿತು.

ಚಿತ್ರಕ್ಕೆ ಮಾದರಿಯಾಗಿ ನಿಂತುಕೊಳ್ಳುವುದು ಲಕ್ಷ್ಮಿಗೆ ತೀರ ಹೊಚ್ಚ ಹೊಸ ಅನುಭವವಾಗಿತ್ತು. ಬೆಳಗ್ಗೆ ಚಿತ್ರದ ಕೆಲಸ ಪ್ರಾರಂಭವಾದ ಒಂದು ಎರಡು ಗಂಟೆಗಳ ಕಾಲ ಅವಳು ಸ್ವಲ್ಪ ಉಲ್ಲಾಸದ ಭಾವ ತೋರುತ್ತ ನಿಂತಿರುತ್ತಿದ್ದಳು. ಬರುಬರುತ್ತ ಅವಳಿಗೆ ಬೇಸರವೂ ಆಯಾಸವೂ ಕಾಣಿಸಿಕೊಳ್ಳುತ್ತಿದ್ದುವು. ಆದರೆ, ತನ್ನ ನಿಜವಾದ ಮನೋಭಾವವನ್ನು ವ್ಯಕ್ತಪಡಿಸಿಬಿಟ್ಟರೆ ಎಲ್ಲಿ ಶ್ರೀಕಾಂತನ ಕೆಲಸ ಕೆಟ್ಟುಹೋಗುವುದೊ ಎಂದು ಪ್ರಯತ್ನಪೂರ್ವಕವಾಗಿ ತನ್ನ ಬೇಸರ ಬಳಲಿಕೆಗಳನ್ನು ಹೊರಕ್ಕೆ ತೋರ್ಪಡಿಸಿಕೊಳ್ಳದೆ, ಉಲ್ಲಾಸದಿಂದ ಇರುವಂತೆ ನಟಿಸುತ್ತಿದ್ದಳು.

ಒಂದು ಕಡೆ ಬೇಸರ ಬಳಲಿಕೆ; ಮತ್ತೊಂದು ಕಡೆ ಮಾಡಲು ಏನೂ ಕೆಲಸವಿಲ್ಲ, ಸುಮ್ಮನೆ ಬೊಂಬೆಯಂತೆ ನಿಂತಿರಬೇಕು. ಎಷ್ಟು ದಿನ ಈ ನೀರಸವಾದ ನಿರ್ಬಂಧಕ್ಕೆ ಒಳಗಾಗಿರುವುದು ? ಹದಿನೈದು ದಿವವೂ ಕಳೆಯಿತು. ಲಕ್ಷ್ಮಿಯ ಸಹನೆ ಮೀರುತ್ತ ಬಂದಿತು. ಶ್ರೀಕಾಂತನಿಗೆ ಚಿತ್ರವೇ ಹೆಚ್ಚು, ತಾನು ಬೇಕಿಲ್ಲ; ಎಷ್ಟಾಗಲಿ ತಾನು ತಿರುಕಿ; ಚಿತ್ರದ ಕೆಲಸ ಮುಗಿದಮೇಲೆ ತಾನು ಮತ್ತೆ ಭಿಕಾರಿಯಾಗಬೇಕು; ಶ್ರೀಕಾಂತನ ಹೃದಯದಲ್ಲಿ ತನಗೆ ಸ್ಥಾನವೇ ಇಲ್ಲ-ಎಂಬ ಈ ಭಾವನೆ ಅವಳ ಮನಸ್ಸಿನಲ್ಲಿ

ಮತ್ತೆ ಮತ್ತೆ ಸುಳಿಯತೊಡಗಿತು. ಒಂದು ದಿನ, ಬಹಳ ಬೇಸರಿಕೆ ತೋರಿದಾಗ, ಇದ್ದಕ್ಕಿದ್ದಹಾಗೆ ತನ್ನ ಸ್ಥಳಬಿಟ್ಟು ಕದಲಿ, ಶ್ರೀಕಾಂತನ ಪಕ್ಕಕ್ಕೆ ಬಂದು ನಿಂತು, ಅವನು ತನ್ನ ಕೆಲಸದಲ್ಲಿ ಎಷ್ಟು ಮುಂದುವರಿದಿದ್ದಾನೆ ಎಂಬುದನ್ನು ಕುತೂಹಲದಿಂದ ನಿರೀಕ್ಷಿಸಿದಳು. ಆಗ ಶ್ರೀಕಾಂತ ಇನ್ನೂ ಬಾನಿಗೆ ಬಣ್ಣಹಾಕಲು ಮೊದಲು ಮಾಡಿದ್ದ.

"ಆಕಾಶಕ್ಕೆ ಬಣ್ಣ ಬಳಿಯುವಾಗಲೂ ನಾನೂ ಇಲ್ಲಿಯೇ ಸುಮ್ಮನೆ ನಿಂತಿರಬೇಕೆ? ಸ್ವಲ್ಪ ಆಚೆಗೆ ಹೋಗಿ ಬರಕೂಡದೆ?"

ಆಕಾಶಕ್ಕೆ ಬಣ್ಣವಿಕ್ಕುತ್ತ ಹಾರಾಡುತ್ತಿದ್ದ ಶ್ರೀಕಾಂತನ ಚಿತ್ತವನ್ನು ಲಕ್ಷ್ಮಿಯ ಪ್ರಶ್ನೆ ಕೊಕ್ಕೆ ಹಾಕಿ ಕೆಳಕ್ಕೆ ಎಳೆದಂತಾಯಿತು. ಇದೇ ಮೊದಲು, ಚಿತ್ರಕೆಲಸದ ನಡುವೆ ಲಕ್ಷ್ಮಿ ಈ ರೀತಿ ಮಾತಾಡಿದ್ದು.

ಶ್ರೀಕಾಂತನ ಕೈ ನಿಂತಿತು; ಸ್ವಲ್ಪ ಅಸಮಾಧಾನವಾಯಿತು.

"ಸದಾ ನಿಂತಿರಬೇಕು; ನಾನು ಸಾಕು ಎನ್ನುವ ವರೆಗೂ ನಿಂತಿರಬೇಕು." ಶ್ರೀಕಾಂತನ ಧ್ವನಿ ಸ್ವಲ್ಪ ಬಿರುಸಾಗಿಯೇ ಇತ್ತು.

"ನಾನು ಹದಿನೈಗು ದಿನದಿಂದ ನೋಡುತ್ತಿದ್ದೇನೆ. ಎಂದೂ ಸಾಕು ಅಂದದ್ದು ಕಾಣೆ. ನನ್ನ ಚಿತ್ರ ಬರೆಯುವಾಗ ಮಾತ್ರ ನಾನು ನಿಂತಿದ್ದರೆ ಸಾಲದೆ? ಸದಾ ಏಕೆ ನಿಂತಿರಬೇಕೊ ನನಗೆ ಅರ್ಥವಾಗುವುದಿಲ್ಲ. ನಿಮಗೆ ಚಿತ್ರವೇ ಹೆಚ್ಚಾಗಿಹೋಗಿದೆ. ನನ್ನ ಮೇಲೆ ಸ್ವಲ್ಪವೂ ಕರುಣೆಯಿಲ್ಲ."

"ಹೌದು, ನಿನ್ನ ಮೇಲೆ ಸ್ವಲ್ಪವೂ ಕರುಣೆಯಿಲ್ಲ. ಇದುವರೆಗೆ ಕರುಣೆಯಿಲ್ಲದೆಯೇ ನಿನ್ನನ್ನು ಸಾಕಿ ಸಲಹಿ ಬೆಳಸಿಕೊಂಡು ಬಂದೆ ಅಲ್ಲವೆ? ನಿನಗಾಗಿ ಜನದ ಅಪವಾದಕ್ಕೂ ಗುರಿಯಾಗಿದ್ದೇನೆ. ನಾನು ಮಾಡಿರುವ ಉಪಕಾರದ ಸ್ಮರಣೆಯೂ ಇಲ್ಲವಲ್ಲ ನಿನಗೆ?"

ಆತ್ಮಗೌರವವನ್ನು, ಸ್ವಾಭಿಮಾನವನ್ನು, ಹೃದಯವನ್ನು ಕೆಣಕುವ ಪ್ರಶ್ನೆಯಿಂದ ಲಕ್ಷ್ಮಿಗೆ ಬಹಳ ನೋವಾಯಿತು. ತಾಳ್ಮೆ ಮೀರಿ ಉತ್ತರ ಹೊರಟಿತು:

"ಯಾರಿಗಾಗಿ ನನ್ನನ್ನು ಸಾಕಿದಿರಿ? ನನ್ನನ್ನು ಉದ್ಧಾರಮಾಡುವುದಕ್ಕಾಗಿ, ದಿಕ್ಕುದೆಸೆಯಿಲ್ಲದ ತಬ್ಬಲಿ ಹೆಣ್ಣನ್ನು ಉದ್ಧಾರಮಾಡುವುದಕ್ಕಾಗಿ ನೀವು ನನ್ನನ್ನು ಸಾಕಿದ್ದರೆ ನಾನು ನಾಯಿಯಂತೆ ನಿಮ್ಮ ಮನೆಯ ಬಾಗಿಲು

ಕಾದುಕೊಂಡು ಬಿದ್ದಿರುತಿದ್ದೆ. ನಿಮ್ಮ ಸ್ವಾರ್ಥ ಮುಗಿದಮೇಲೆ........"

"ಎಷ್ಟಾಗಲಿ ತಿರುಕಿಯ ಬದ್ಧಿ !" ಎಂದು ಶ್ರೀಕಾಂತ ತಾನು ಹಿಡಿದಿದ್ದ ಕುಂಚವನ್ನು ರೊಯ್ಯನೆ ಬಿಸುಟ.

"ಹೌದು. ನಾನು ತಿರುಕಿ. ನನ್ನನ್ನು ಮತ್ತೆ ಬೀದಿಗೆ ನೂಕಿಬಿಡಿ.... ಅಯ್ಯೊ, ದೇವರೇ" ಎಂದು ತಟ್ಟನೆ ಹೋಗಿ ಒಂದು ಸೋಫಾದ ಮೇಲೆ ಕುಳಿತು, ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಶ್ರೀಕಾಂತ ಮಾತಾಡದೆ ಕೆಳಕ್ಕೆ ಇಳಿದು ಹೊರಟುಹೋದ. ಅಂದಿನ ಚಿತ್ರಕೆಲಸ ಅಲ್ಲಿಗೆ ಮುಗಿಯಿತು.

## ೧೧

ಬಹಳ ಹೊತ್ತಾದಮೇಲೆ, ದುಃಖ ಶಮನವಾದಮೇಲೆ, ಲಕ್ಷ್ಮಿ ಎದ್ದು ಕೆಳಕ್ಕೆ ಇಳಿದುಹೋಗಲು ಹೋಗುತ್ತಿದ್ದವಳು ಹಾಗೆಯೇ ಚಿತ್ರದ ಮುಂದೆ ಬಂದು ನಿಂತು ತುಸಹೊತ್ತು ಅದನ್ನು ದೃಷ್ಟಿಸಿ ನೋಡಿದಳು. ಬೆಳಿಯ ಸಿರಿ ಮೊಳೆಯಲ್ಲಿ, ಹೂವಿನ ಸೊಂಪು ಮುಗುಳಿನಲ್ಲಿ, ಕಾಣುವಂತೆ ಚಿತ್ರದ ಸೊಬಗು ಶ್ರೀಕಾಂತ ಹಾಕಿದ್ದ ರೂಪರೇಖೆಗಳಲ್ಲಿ ಸ್ಪಷ್ಟವಾಗಿ ಮೂಡಿ ಕಾಣುತ್ತಿತ್ತು. ಚಿತ್ರ ಮುಗಿದಮೇಲೆ ಅದು ಎಷ್ಟು ಸುಂದರವಾಗಬಹುದೆಂಬುದನ್ನು ಮನದಲ್ಲಿಯೇ ಕಲ್ಪಿಸಿಕೊಂಡಳು. ಶ್ರೀಕಾಂತ ಏನು ಅಂದರೂ ಸರಿಯೆ, ಮನಸ್ಸಿಗೆ ಹಚ್ಚಿಕೊಳ್ಳದೆ ಅವನು ಹೇಳಿದಂತೆ ಕೇಳುವುದೆಂದು ಅನೇಕ ಸಲ ನಿರ್ಧರಿಸಿದ್ದಂತೆ ಈ ಸಲವೂ ನಿರ್ಧರಿಸಿದಳು.

ಮಾತು ತೆಗೆದದ್ದು ತನ್ನ ತಪ್ಪು, ಆದ್ದರಿಂದ ಅವನ ಕ್ಷಮೆ ಕೇಳುವುದೆಂದು ಮನಸ್ಸುಮಾಡಿ ಲಕ್ಷ್ಮಿ ಕೆಳಕ್ಕೆ ಇಳಿದು ಹೋದಳು. ಶ್ರೀಕಾಂತನ ಸುಳಿವು ಎಲ್ಲೂ ಕಾಣಲಿಲ್ಲ. ಹೋಟೆಲಿನಿಂದ ಊಟ ಬಂದು ಸಿದ್ಧವಾಗಿತ್ತು. ಶ್ರೀಕಾಂತ ಇನ್ನೂ ಊಟ ಮಾಡಿರಲಿಲ್ಲ. ಮಲಗಿದ್ದಾನೆಯೋ ಎಂದು ಅವನು ಮಲಗುವ ಕೋಣೆಗೆ ಹೋಗಿ ನೋಡಿದಳು. ಅಲ್ಲಿಯೂ ಇರಲಿಲ್ಲ. ಮಾಲಿಯನ್ನು ಕೇಳಿದಳು. ಎಲ್ಲೋ ಹೊರಗೆ ಹೋದರೆಂದು ಅವನು ಉತ್ತರಕೊಟ್ಟ. ಲಕ್ಷ್ಮಿಗೆ ಬಹಳ ವ್ಯಸನವಾಯಿತು. ತಾನು ಮಾಡಿದ್ದೆಂದು ಅವಳು ತಿಳಿದು

ಕೊಂಡಿದ್ದ ತಪ್ಪಿನ ಕಲ್ಪನೆ ಬರುಬರುತ್ತ ದೊಡ್ಡದಾಗಿ ಬೆಳೆಯತೊಡಗಿತು. ಏನು ಮಾಡುವುದಕ್ಕೂ ತೋಚದೆ ತನ್ನ ಕೋಣೆಗೆ ಹೋಗಿ ಹಾಸಿಗೆಯಮೇಲೆ ಸುಮ್ಮನೆ ಮಲಗಿಬಿಟ್ಟಳು. ದೇಹಾಯಾಸ, ಹಸಿವು, ದುಃಖ-ಇವುಗಳ ಭಾರದಿಂದ ಬಳಲಿದ್ದ ಮನಸ್ಸು ನಿದ್ರೆಗೆ ಎಡೆಗೊಟ್ಟಿತು.

ಶ್ರೀಕಾಂತನ ಮನಸ್ಸು ಕಲಕಿಹೋಗಿತ್ತು. ತಾನು ಲಕ್ಷ್ಮಿಯನ್ನು ಮನನೋಯಿಸಿದ್ದೇನೆಂಬ ಅರಿವು ಅವನಿಗೆ ಉಂಟಾಗದೆ ಇರಲಿಲ್ಲ. ಅವನಿಗೂ ಏನು ಮಾಡುವುಕ್ಕೂ ತೋಚದೆ ಸ್ವಲ್ಪ ಹೊರಕ್ಕೆ ಹೋಗಿ ತಿರುಗಾಡಿ ಕೊಂಡು ಬರೋಣವೆಂದು ಹೋಗಿದ್ದವನು, ಬಹಳ ಬಿಸಿಲಾದ್ದರಿಂದ, ಬೇಗನೆ ಹಿಂದಿರುಗಿ ಬಂದ. ಬಂದವನೆ ಮೇಲಕ್ಕೆ ಹೋಗಿ ನೋಡಿದ. ಅಲ್ಲಿ ಲಕ್ಷ್ಮಿ ಇರಲಿಲ್ಲ. ಮತ್ತೆ ಕೆಳಕ್ಕೆ ಬಂದ. ಊಟ ಇದ್ದ ಕಡೆ ಇತ್ತು. ಲಕ್ಷ್ಮಿಯ ಕೋಣೆಯ ಬಾಗಿಲ ಬಳಿ ಹೋದ. ಲಕ್ಷ್ಮಿ ಮಗ್ಗುಲಾಗಿ ಬಾಗಿಲ ಕಡೆಯ ಮುಖಹಾಕಿಕೊಂಡು ಮಲಗಿದ್ದಳು. ನಿದ್ದೆಯ ಮಡಿಲಿನಲ್ಲಿ ಮಲಗಿದ್ದ ಅವಳ ಮುಖದಮೇಲೆ ಅದೊಂದು ಬಗೆಯ ಮುಗ್ಧಭಾವದ ಮುದ್ರೆ ಒತ್ತಿ ನೆಲಸಿತ್ತು. ಆವನ ಕಣ್ಣಿಗೆ ಬಹು ಮನೋಹರವಾಗಿ ಕಂಡಳು ಆವಳು. ಮೆಲ್ಲನೆ ಆವಳ ಕೋಣೆಯೊಳಕ್ಕೆ ಹೋದ. ಅವಳು ಮಲಗಿದ್ದಾಗ ಅವನು ಹೀಗೆ ಹೋದದ್ದು ಇದೇ ಮೊದಲು. ನಿದ್ರಾಮುದ್ರಿತ ಸುಂದರ ಸ್ತ್ರೀಮುಖವನ್ನು ನೋಡಿದರೆ ಒಂದು ವಿಚಿತ್ರರೀತಿಯ ಪ್ರೇಮಭಾವನೆ ಹುಟ್ಟುತ್ತದೆ: ಗಿಡದಮೇಲೆ ಅರಳಿರುವ ಹೂವನ್ನು ತನ್ನದಾಗಿ ಪಡೆಯಬೇಕು, ಆದರೆ ಅದನ್ನು ಕುಯ್ಯಬಾರದು ಎಂದೆನಿಸುವಂತೆ; ಆದಕ್ಕಾಗಿ ಪುಷ್ಪಪ್ರೇಮಿ ಅದನ್ನು ಬೆರಳುಗಳಿಂದ ಮೃದು ವಾಗಿ ಮುಟ್ಟುತ್ತಾನೆ, ದೂರದಿಂದಲೆ ಅದರ ಪರಿಮಳವನ್ನು ಆಘ್ರಾಣಿಸುತ್ತಾನೆ. ಅಂತೆಯೆ ಶ್ರೀಕಾಂತ ಮೆಲ್ಲನೆ ಅವಳ ಬಳಿಸಾರಿ, ಅವಳ ಹೂದುಟಿಗಳಮೇಲೆ ಒಂದು ಹೂಮುತ್ತು........ಒತ್ತಲಿಲ್ಲ; ತಟಕ್ಕನೆ ಹಿಂದಕ್ಕೆ ಸರಿದ. ಅಲ್ಲ, ತಾನು ಮಾಡುತ್ತಿರುವುದೇನು? ತಾನು ಅವಳನ್ನು ಪ್ರೇಮಿಸುವುದು ದಿಟ! ಆದರೆ ಅದನ್ನು ವ್ಯಕ್ತಪಡಿಸಲು ಈಗ ಸಮಯವಲ್ಲ. ಸದ್ಯದ ಮಟ್ಟಿಗಾದರೂ ಒಲವನ್ನು ಕಲೆಗಾಗಿ ಬಲಿ ಕೊಡಬೇಕು. ಲಕ್ಷ್ಮಿಯ ಕ್ಷಮೆ ಕೇಳಬೇಕು; ಅವಳ ಮನಸ್ಸನ್ನು ಪ್ರಸನ್ನಗೊಳಿಸಬೇಕು. ಮೊದಲು ತನ್ನ ಮಹೋದ್ದೇಶ ವನ್ನು ಸಾಧಿಸಬೇಕು.

ಶ್ರೀಕಾಂತ- "ನೀನು ಮಾಡಿಬಿಡು ನನಗೆ ಹಸಿವಿಲ್ಲ" ಎಂದ. ಏನೋ ಯೋಚನೆಯಲ್ಲಿ ಮುಳುಗಿದ್ದವನು ಹಾಗೆಂದ; ಅಲ್ಲದೆ, ಹಸಿವೂ ಮುಚ್ಚಿಹೋಗಿತ್ತು.

ತನ್ನ ಮೇಲಿನ ಮುನಿಸು ಇನ್ನೂ ಆರಿಲ್ಲವೆಂದು ಲಕ್ಷ್ಮಿಗೆ ತೋರಿ— "ತಿಳಿಯದೆ ಏನೇನೋ ಆಡಿಬಿಟ್ಟೆ. ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡಿ. ಎಲ್ಲವನ್ನೂ ಮರೆತುಬಿಡಿ ಊಟಮಾಡಿ, ಮತ್ತೆ ಕೆಲಸಕ್ಕೆ ಮೊದಲು ಮಾಡೋಣ" ಎಂದಳು.

ಶ್ರೀಕಾಂತನಿಗೆ ದಿಗ್ಭ್ರಮೆಯಾಯಿತು. ತಾನು ಅವಳ ಕ್ಷಮೆ ಕೇಳಬೇಕೆಂದು ಮಾಡಿಕೊಂಡಿದ್ದ. ಅವಳೇ ತನ್ನ ಕ್ಷಮೆ ಕೇಳಿಕೊಂಡು ಬಿಟ್ಟಿದ್ದಾಳೆ. ಎಷ್ಟು ಸೂಕ್ಷ್ಮವಾದ ಮನಸ್ಸು ಅವಳದ್ದು! ಎಷ್ಟು ನಿಸ್ಸ್ವಾರ್ಥವಾದ, ಪ್ರೇಮಪೂರಿತವಾದ ಹೃದಯ ಅವಳದ್ದು! ಅವಳು ಹೇಳಿದಂತೆ ತಾನೇ ಸ್ವಾರ್ಥಿ.

"ಲಕ್ಷ್ಮಿ, ತಪ್ಪು ನಿನ್ನದಲ್ಲ; ನನ್ನದು. ಕ್ಷಮಿಸಬೇಕಾದವಳು ನೀನು."

ಎಂದಿನಂತೆ ಇಬ್ಬರೂ ಒಟ್ಟಿಗೆ ಕುಳಿತು ಊಟಮಾಡಿದರು. ಅನಿರೀಕ್ಷಿತವಾಗಿ, ತಾತ್ಕಾಲಿಕವಾಗಿ ಬಂದ ಮುನಿಸು ಅವರ ಪರಸ್ಪರ ಪ್ರೇಮಭಾವವನ್ನು ಹೆಚ್ಚಿಸಿತೆ ಹೊರತು ತಗ್ಗಿಸಲಿಲ್ಲ! ಆದರೆ ಪ್ರೇಮದಿಂದ ತುಂಬಿದ್ದ ಅವರ ಹೃದಯ ಸಂಪುಟಗಳಿಗೆ ಇನ್ನೂ ಮೌನದ ಮುಚ್ಚಳ ಹಾಕಿತ್ತು. ಬೇಕೆಂದೇ ಅವರು ಅದನ್ನು ತೆರೆದಿರಲಿಲ್ಲ.

೧೨

ಹೀಗೆಯೇ ಎರಡು ಮೂರು ತಿಂಗಳಾಯಿತು. ಶ್ರೀಕಾಂತನ ಚಿತ್ರದ ಕೆಲಸ ಅರೆವಾಸಿ ಮುಗಿದಂತಾಗಿತ್ತು. ಈ ಮಧ್ಯೆ, ಶ್ರೀಕಾಂತನ ಹಣಕಾಸಿನ ಸ್ಥಿತಿ ಕೆಡುತ್ತಾ ಬಂತು. "ಕುಳಿತು ಉಂಬವನಿಗೆ ಕುಡಿಕೆ ಹಣ ಸಾಲದು" ಎನ್ನುವಂತೆ, ಅವನು ಹಿಂದೆ ಗಳಿಸಿದ್ದ ಹಣವೆಲ್ಲ ಲಕ್ಷ್ಮಿಯ ಶಿಕ್ಷಣ ಪೋಷಣೆಗಳಿಗೂ ಕಲಕಾಲ ಕುಳಿತು ತಿನ್ನುವುದಕ್ಕೂ ವೆಚ್ಚವಾಗಿಹೋಯಿತು. ಈಚೆಗೆ ಶ್ರೀಕಾಂತ ತನ್ನ ಒಂದು ಮಹೋದ್ದೇಶದ ಸಾಧನೆಗಾಗಿ ಸಂಪಾದನೆ

ಯಾಗುವ ಎಲ್ಲ ಕೆಲಸವನ್ನೂ ಬಲಿಕೊಟ್ಟುಬಿಟ್ಟದ್ದರಿಂದ ಆ ಭಾಗದಲ್ಲಿ ಅವನಿಗೆ ಕಾಸಿನ ಸಂಪಾದನೆಯೂ ಇರಲಿಲ್ಲ ಅವನ ಹಣಕಾಸಿನ ಸ್ಥಿತಿ ಎಷ್ಟು ಕೆಟ್ಟಿತ್ತೆಂದರೆ, ಮನೆಬಾಡಿಗೆ ಎರಡು ತಿಂಗಳಿಂದ ಬಾಕಿ ನಿಂತಿತ್ತು; ಮಾಲಿಗೆ ಮೂರು ನಾಲ್ಕು ತಿಂಗಳಿಂದ ದುಡ್ಡು ಕೊಟ್ಟಿರಲಿಲ್ಲ; ಹೋಟೆಲಿನವನು ಬಾಕಿಯನ್ನೆಲ್ಲ ಕೊಡದೆ ಹೋದರೆ ಇನ್ನು ಊಟ ತರುವುದಿಲ್ಲವೆಂದು "ನೋಟೀಸು" ಕೊಟ್ಟುಬಿಟ್ಟ. ಶ್ರೀಕಾಂತ ಎಲ್ಲರಿಗೂ ಸಬೂಬು ಹೇಳಿಕೊಂಡು ಹಾಗೆಯೆ ಒಂದು ತಿಂಗಳು ದಬ್ಬಿದ. ಹೋಟೆಲಿನವನು ನಿಜವಾಗಿಯೂ ಊಟ ತರುವುದನ್ನು ನಿಲ್ಲಿಸಿಯೇ ಬಿಟ್ಟ ಮನೆಯವನೂ ಬಂದು ರೇಗಾಡಿ ಹೋದ. ಅಂದು ಲಕ್ಷ್ಮಿಗೆ ಗೊತ್ತಾಯಿತು ಶ್ರೀಕಾಂತನ ಶೋಚನೀಯ ಸ್ಥಿತಿ. ಅವಳು ಶ್ರೀಕಾಂತ ತನಗಾಗಿ ಮಾಡಿಸಿಕೊಟ್ಟಿದ್ದ ಎಲ್ಲ ಒಡವೆಗಳನ್ನೂ ಶ್ರೀಕಾಂತನ ಕೈಗೆ ಕೊಟ್ಟುಬಿಟ್ಟು, ಎಲ್ಲರ ಸಾಲವನ್ನೂ ತೀರಿಸಬೇಕೆಂದೂ ಇನ್ನು ಒಂದೆರಡು ತಿಂಗಳಲ್ಲಿ ಹೇಗಾದರೂ ಮಾಡಿ ಚಿತ್ರವನ್ನು ಮುಗಿಸಬೇಕೆಂದೂ ಆನಂತರ ಹಣ ಸಂಪಾದನೆಯಾಗುವಂಥ ಚಿತ್ರಕೆಲಸಕ್ಕೆ ಮತ್ತೆ ಮೊದಲು ಮಾಡಬೇಕೆಂದೂ ಸಲಹೆ ಕೊಟ್ಟಳು. ಶ್ರೀಕಾಂತನಿಗೆ ಇಷ್ಟವಿಲ್ಲದಿದ್ದರೂ ಪರಿಸ್ಥಿತಿಯ ನಿರ್ಬಂಧಕ್ಕೆ ಒಳಗಾಗಿ ಅವನು ನಿಶ್ವಾಸದಿಂದ ಇತ್ತ ಒಡವೆಗಳನ್ನು ತೆಗೆದುಕೊಂಡು ಸಾಲಗಳನ್ನು ತೀರಿಸಿದ. ಇದರಿಂದ ಬೀಸುವ ದೊಣ್ಣೆಯ ಏಟನ್ನು ಒಮ್ಮೆ ತಪ್ಪಿಸಿಕೊಂಡ ಹಾಗಾಯಿತು, ಅಷ್ಟೆ. ಮತ್ತೆ ದೊಣ್ಣೆ ಬೀಸಿತು. ಶ್ರೀಕಾಂತನ ಚಿತ್ರ ಲಕ್ಷ್ಮಿ ಹೇಳಿದಂತೆ ಒಂದೆರಡು ತಿಂಗಳಲ್ಲಿ ಮುಗಿಯಲಿಲ್ಲ. ಮನೆಯ ಬಾಡಿಗೆಯವನೇನೋ ಸ್ವಲ್ಪ ಕಾಲಾವಕಾಶ ಕೊಟ್ಟ. ಹೋಟೆಲಿನವನು ಒಪ್ಪಲಿಲ್ಲ. ಅದಕ್ಕೆ ಲಕ್ಷ್ಮಿ ಒಂದು ಸಲಹೆ ಕೊಟ್ಟಳು: ಹೋಟೆಲಿನವನಿಗೆ ಕೆಲವು ಚಿತ್ರಗಳನ್ನು ಮಾರಿಬಿಡುವುದೆಂದು. ಹೋಟೆಲಿನವನು ಮೊದಲು ಸಮ್ಮತಿಸಿದ; ಆದರೆ ಶ್ರೀಕಾಂತ ಹೇಳಿದ ಬೆಲೆ ಕೇಳಿ, "ನಿಮ್ಮ ಚಿತ್ರ ನಿಮ್ಮಲ್ಲೇ ಇರಲಿ, ನಮ್ಮ ಬಾಕಿ ನಮಗೆ ಕೊಟ್ಟುಬಿಡಿ" ಎಂದ. ಬಾಕಿ ಕೊಡಲು ಎಲ್ಲಿಂದ ದುಡ್ಡು ತರುವುದು? ಎಂದೂ, ಯಾರಲ್ಲೂ ಸಾಲ ಮಾಡದಿದ್ದವನು ಈಗ ತತ್‍ಕ್ಷಣದಲ್ಲಿ ಯಾರ ಬಳಿಗೆ ಸಾಲಕ್ಕೆ ಹೋಗುವುದು? ಹೋಟೆಲಿನವನು ಕೇಳಿದ ಬೆಲೆಗೆ ನಾಲ್ಕೈದು ಚಿತ್ರಗಳನ್ನು ಕೊಟ್ಟು ಅವನ ಬಾಕಿ ತೀರಿಸ

ಬೇಕಾಯಿತು. ಹೀಗೆ ಹೋಟೆಲಿನವನಿಗೆ ಕೊಟ್ಟ ಚಿತ್ರಗಳಲ್ಲಿ ಶ್ರೀಕಾಂತನಿಗೆ ಅತ್ಯಂತ ಮೆಚ್ಚಾಗಿದ್ದ ಒಂದು ಚಿತ್ರವೂ ಇತ್ತು.

ಇನ್ನು ಮೇಲೆ ಹೋಟೆಲಿನಿಂದ ಊಟ ತರುವುದು ಸಾಕೆಂದೂ, ಅದರಿಂದ ಹೆಚ್ಚಿನ ವೆಚ್ಚವಾಗುವುದೆಂದೂ, ಮನೆಗೇ ಸಾಮಾನು ತಂದು ಹಾಕಿದರೆ ತಾನೇ ಅಡಿಗೆ ಮಾಡುವುದಾಗಿಯೂ ಲಕ್ಷ್ಮಿ ಹೇಳಿದಳು. ಇದಕ್ಕೆ ಶ್ರೀಕಾಂತ ಒಪ್ಪದೆ ಬೇರೆ ದಾರಿಯೇ ಇರಲಿಲ್ಲ.

ಸಾಮಾನು ತರುವುದಕ್ಕೇ ಆಗಲಿ, ಕೂಡಲೆ ಎಲ್ಲಿಂದ ದುಡ್ಡು ತರುವುದು? ಶ್ರೀಕಾಂತನ ತಲೆಯಮೇಲೆ ದೊಡ್ಡ ಭಾರ ಇದ್ದಕ್ಕಿದ್ದಂತೆಯೇ ಹೇರಿಕೊಂಡಿತು.

ಶ್ರೀಕಾಂತ ತನ್ನ ಚಿತ್ರಗಳನ್ನು ಒಂದೊಂದಾಗಿ ಮಾರತೊಡಗಿದ. ಚಿತ್ರಕಲಾಭಿಮಾನಿಗಳು ತಾವಾಗಿ ಇವನ ಬಳಿಗೆ ಬಂದು ಚಿತ್ರಗಳನ್ನು ಬೆಲೆಗೆ ಕೇಳುತ್ತಿದ್ದಾಗ ಶ್ರೀಕಾಂತ ತನ್ನ ಆತ್ಮಸಂತೋಷಕ್ಕಾಗಿ ಬರೆದ ಒಂದು ಚಿತ್ರವನ್ನೂ ಮಾರಲು ಒಪ್ಪುತ್ತಿರಲಿಲ್ಲ; ಒಪ್ಪಿದರೂ, ಬಹಳ ಬೆಲೆ ಕೇಳುತ್ತಿದ್ದ. ಚಿತ್ರಗಳೆಂದರೆ ಹುಚ್ಚಿದ್ದ ಕೆಲವರು ಅವನು ಕೇಳಿದ ಬೆಲೆಯನ್ನೇ ಕೊಡುತ್ತಿದ್ದರು. ಅಂಥವರೇ ಈಗ ೫೦ ರೂಪಾಯಿ ಬೆಲೆ ಹೇಳಿದ ಚಿತ್ರಕ್ಕೆ ೫ ರೂಪಾಯಿ ಕೂಡ ಕೊಡಲು ಸಿದ್ಧರಾಗಿರಲಿಲ್ಲ. ಹೋದಷ್ಟು ಬೆಲೆಗೆ ಮಾರದೆ ಬೇರೆ ದಾರಿಯು ಇಲ್ಲದಿದ್ದುದರಿಂದ ಶ್ರೀಕಾಂತ ತನ್ನ ಚಿತ್ರಗಳನ್ನು ಅತ್ಯಲ್ಪ ಬೆಲೆಗೆ ಮಾರಿ ಬಾಳು ನೂಕಬೇಕಾಗಿತ್ತು. ಬರುಬರುತ್ತ ಅವನ ಚಿತ್ರಶಾಲೆ ಬರಿದಾಗುತ್ತ ಬಂತು. ಇದರಿಂದ ಹೊಟ್ಟೆ ಹೊರೆಯುವಷ್ಟು ಮಾತ್ರ ಹಣ ಸಂಪಾದನೆಯಾಗುತ್ತಿದ್ದುದರಿಂದ ಬೇಗನೆ ಮಾಲಿಯನ್ನು ಬಿಡಿಸಬೇಕಾಗಿ ಬಂತು ಹಿಂದೆ ಸೊಂಪಾಗಿದ್ದ ಮನೆಮುಂದಿನ ಉದ್ಯಾನ ನೀರಿಲ್ಲದೆ ಒಣಗುತ್ತ ಬಂತು. ಮನೆಯೆಲ್ಲ ಬಿಕೋ ಎನ್ನುವಂತಾಯಿತು.

ಇಷ್ಟಾದರೂ ಶ್ರೀಕಾಂತನ ಉತ್ಸಾಹ ಕುಗ್ಗಲಿಲ್ಲ; ಹುಚ್ಚು ಹಿಂಗಲಿಲ್ಲ. ಲಕ್ಷ್ಮಿ ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ, ಹರ್ಷಚಿತ್ತಳಾಗಿದ್ದು ಕೊಂಡು, ಮನೆಗೆಲಸವನ್ನೂ ಮಾಡಿಕೊಂಡು ಶ್ರೀಕಾಂತನ ಚಿತ್ರಕೆಲಸಕ್ಕೆ ರವಾಗುತ್ತಿದ್ದಳು.

೧೩

ಕಾಲ ಕಳೆಯುತ್ತ ಬಂತು; ಶ್ರೀಕಾಂತನ ಚಿತ್ರ ಮುಗಿಯುತ್ತ ಬಂತು

ಒಂದು ದಿನ ಶ್ರೀಕಾಂತ ತನಗೆ ತಾನೇ ಹಿಗ್ಗುತ್ತಿದ್ದ, ಮುಗಿಯುತ್ತ ಬಂದಿದ್ದ ಚಿತ್ರವನ್ನು ನೋಡಿ: "ಆಹಾ, ಎಷ್ಟು ಚೆನ್ನಾಗಿ ಮೂಡಿ ಬಂದಿದೆ ಚಿತ್ರ! ಇನ್ನು ಒಂದೆರಡು ದಿನಗಳ ಕೆಲಸ ಇದೆ, ಅಷ್ಟೆ. ಅದು ಆದರೆ ಚಿತ್ರ ಮುಗಿದಂತೆಯೇ. ಇದಕ್ಕಾಗಿ ಎಷ್ಟೊಂದು ತ್ಯಾಗ ಮಾಡಿದ್ದೇನೆ. ಸರ್ವ ತ್ಯಾಗದ ಫಲ ಇದು" ಎಂದುಕೊಂಡು ಲಕ್ಷ್ಮಿಯ ಕಡೆ ಒಮ್ಮೆ ತಿರುಗಿ ನೋಡಿದ; ಚಿತ್ರಕ್ಕೆ ಮಾದರಿಯಾಗಿ ನಿಂತಿದ್ದ ಲಕ್ಷ್ಮಿ ಹಾಗೆಯೇ ಕುರ್ಚಿಯನ್ನು ಆಶ್ರಯಿಸಿ ಕಣ್ಣುಮುಚ್ಚಿ ಕುಳಿತಿದ್ದಳು. ಅವಳ ಮುಖ ಬಿವರಿತ್ತು, ಕಂಗೆಟ್ಟಿತ್ತು. ಬಳಲಿಕೆ ಮುದ್ರೆಯೊತ್ತಿ ನೆಲಸಿತ್ತು. ಮುಖದಲ್ಲಿ ಮಿಂಚುತ್ತಿದ್ದ ಕಾಂತಿಯೆಲ್ಲಿ? ಅವಳ ಮುಖಕಮಲದ ನಸುಗೆಂಪು ಏನಾಯಿತು? ತುಟಿಗಳ ಕಡುಗೆಂಪೆಲ್ಲಿ? ತಿರುಕಿಯಾಗಿ ಬಂದ ಲಕ್ಷ್ಮಿಗಿಂತ ಕಡೆಯಾಗಿ ಕಾಣುತ್ತಿದ್ದಾಳೆ ಇಂದು ತನ್ನ ಕಣ್ಣೆದುರಿಗಿರುವ ಲಕ್ಷ್ಮಿ. ಚಿತ್ರ ಬರೆಯುವ ಹುಚ್ಚಿನಲ್ಲಿ ತಾನು ಅವಳನ್ನು ಗಮನಿಸಿ ನೋಡಲಿಲ್ಲ. ಗಮನಿಸಿ ನೋಡಲಿಲ್ಲವೆ? ಗಮನಿಸಿ ನೋಡದೆ ಚಿತ್ರ ಬರೆಯುತ್ತಿದ್ದುದು ಹೇಗೆ? ಹೌದು, ಗಮನಿಸುತ್ತಿದ್ದ: ಅವಳ ಚೆಲುವನ್ನು ಗಮನಿಸುತ್ತಿದ್ದ; ಆದರೆ ಅವಳ ಹೃದಯವನ್ನು ಮರೆತಿದ್ದ. ಅವಳ ಚೆಲುವನ್ನು ಹೀರಿ ಹೀರಿ ತನ್ನ ಚಿತ್ರದಲ್ಲಿ ತುಂಬುತ್ತಿದ್ದ. ಲಕ್ಷ್ಮಿಯ ಮೈ ಬರುಬರುತ್ತ ಕೃಶವಾಗುತ್ತಿತ್ತು; ಚಿತ್ರದ ರತಿಯ ಮೈ ಕೂಡಿಕೊಳ್ಳುತ್ತಿತ್ತು, ಲಕ್ಷ್ಮಿಯ ಮುಖಕಾಂತಿ 'ರತಿ'ಯ ಮುಖದಲ್ಲಿ ಇಮ್ಮಡಿಯಾಗಿ ಹೊಳೆಯುತ್ತಿತ್ತು. ಲಕ್ಷ್ಮಿಯ ನಗೆ ರತಿಯ ತುಟಿಗಳಲ್ಲಿ ಸೆರೆಯಾಗಿತ್ತು. ಲಕ್ಷ್ಮಿಗೆ ಜೀವವಿತ್ತು; 'ರತಿ'ಗೆ ಜೀವ ವೊಂದಿರಲಿಲ್ಲ. ಶ್ರೀಕಾಂತ ಹಾಗೆಯೇ ಒಮ್ಮೆ ಲಕ್ಷ್ಮಿಯನ್ನು ಒಮ್ಮೆ ಚಿತ್ರವನ್ನು ದಿಟ್ಟಿಸಿ ನೋಡಿದ. ಹೌದು; 'ರತಿ'ಗೆ ಇನ್ನೂ ಜೀವಕಳೆ ಬಂದಿರಲಿಲ್ಲ. ಮರುದಿನ ಒಂದು ದಿನ ಕೆಲಸ ಮಾಡಿದರೆ ಸಾಕು; ರತಿಗೆ ಜೀವಕಳೆ ಒಂದು ತಂದರೆ ಸಾಕು. ಚಿತ್ರ ಮುಗಿದಂತೆಯೇ ಸರಿ. ಆಮೇಲೆ ಲಕ್ಷ್ಮಿ, ರತಿ—ಇಬ್ಬರೂ ತನ್ನವರು. ಪಾಪ, ಲಕ್ಷ್ಮಿ ಈಗ ನಿಜವಾಗಿಯೂ,

ಬಹಳ ಕೃಶವಾಗಿಹೋಗಿದ್ದಾಳೆ; ಸರಿಯಾದ ಆಹಾರವಿಲ್ಲದೆ, ವಿಹಾರವಿಲ್ಲದೆ, ನಿದ್ದೆಯಿಲ್ಲದೆ, ವಿನೋದವಿಲ್ಲದೆ, ಮಾತುಕತೆಯಿಲ್ಲದೆ, ಗಾಳಿ ಬೆಳಕಿಲ್ಲದೆ, ತನಗಾಗಿ ದುಡಿದು ದುಡಿದು ಬಹಳ ಕೃಶವಾಗಿಹೋಗಿದ್ದಾಳೆ. ಚಿತ್ರ ಮುಗಿದ ಕೂಡಲೆ ಅವಳ ಆರೈಕೆಗೆ ಗಮನ ಕೊಡಬೇಕು.

ಹೀಗೆ ಅಂದುಕೊಂಡು, ಚಿತ್ರ ತೋರಿಸಲು ಲಕ್ಷ್ಮಿಯನ್ನು ಬಳಿಗೆ ಕರೆದ. ಲಕ್ಷ್ಮಿ ಬಂದು ಶ್ರೀಕಾಂತನ ಪಕ್ಕದಲ್ಲಿ ಚಿತ್ರವನ್ನು ದಿಟ್ಟಿಸಿ ನೋಡುತ್ತಾ ನಿಂತಳು. ಚಿತ್ರವನ್ನು ನೋಡಿ ಅವಳಿಗೆ ಆನಂದವಾಗಿರಬೇಕು; ತಾನು ಶ್ರೀಕಾಂತನಿಗೆ ಕಡೆಗೂ ಉಪಯೋಗವಾದೆ ಎಂಬ ತೃಪ್ತಿಯುಂಟಾಗಿರಬೇಕು. ಆನಂದ-ತೃಪ್ತಿ ಸೂಚಕವಾಗ ನೋಟ ಅವಳ ಮುಖದಲ್ಲಿ ನೆಲಸಿತ್ತು.

ಇದ್ದಕ್ಕಿದ್ದಂತೆ ಅವಳು ಇನ್ನೇನು ಕುಸಿದು ಬೀಳಬೇಕು—ಹಾಗೆಯೇ ಶ್ರೀಕಾಂತನನ್ನು ಒರಗಿ ತಬ್ಬಿ ಹಿಡಿದುಕೊಂಡಳು.

ಹಾಗೆ ಅವಳು ಎಂದೂ ತಬ್ಬಿರಲಿಲ್ಲ: ಚಿತ್ರವನ್ನೇ ನೋಡುವುದರಲ್ಲಿ ಮಗ್ನನಾಗಿದ್ದ ಶ್ರೀಕಾಂತ ಅವಳು ತನ್ನನ್ನು ಪ್ರೇಮಭಾವದ ಒಂದು ಭರದಲ್ಲಿ ತಬ್ಬಿದಳೆಂದು ಭಾವಿಸಿಕೊಂಡ. ಚಿತ್ರ ಮುಗಿಯುತ್ತ ಬಂದದ್ದರಿಂದ, ಲಕ್ಷ್ಮಿ ತನ್ನನ್ನು ತಬ್ಬಿದ್ದು ಅವನಿಗೆ ಅಷ್ಟೊಂದು ಅನಪೇಕ್ಷಣೀಯವಾಗಿ ತೋರಲಿಲ್ಲ; ಅನೈಚ್ಛಿಕವಾಗಿ ತಾನೂ ಅವಳನ್ನು ತಬ್ಬಿಹಿಡಿದು ನಿಂತಿದ್ದ.

"ಲಕ್ಷ್ಮಿ, ನೋಡು. ಚಿತ್ರ—ನಿನ್ನ ಚಿತ್ರ—ರತಿಯ ಚಿತ್ರ—ಎಷ್ಟು ಸೊಗಸಾಗಿ ಬಂದಿದೆ. ನೀನೇ ಅಲ್ಲಿ ನಿಂತಿರುವೆಯೋ ಎಂಬಂತಿದೆ; ಆದರೆ ಆ ರತಿ ಇನ್ನೂ ಜೀವ ತಳೆದಿಲ್ಲ; ರತಿಗೆ ಇನ್ನೂ ಜೀವಕಳೆ ಬಂದಿಲ್ಲ. ನೀನು ನನ್ನ ಜೀವ; ಚಿತ್ರದ ಜೀವ. ಚಿತ್ರಕ್ಕೆ ಜೀವಕಳೆ ಕೊಡುವವನು ನಾನಲ್ಲ, ನೀನು. ಚಿತ್ರಕ್ಕೆ ಜೀವಕಳೆ ಒಂದನ್ನು ಕೊಟ್ಟುಬಿಡು. ಅಲ್ಲಿಗೆ ಚಿತ್ರ ಮುಗಿದಂತೆ. ಅದು ಒಂದು ದಿನ ಹಿಡಿಯಬಹುದು, ಒಂದು ಕ್ಷಣ ಹಿಡಿಯಬಹುದು...."

ಶ್ರೀಕಾಂತ ಚಿತ್ರವನ್ನು ನೋಡುತ್ತಲೇ ಮಾತಾಡುತ್ತಿದ್ದ; ಲಕ್ಷ್ಮಿಯ ಕಡೆ ತಿರುಗಿಯೂ ನೋಡಿರಲಿಲ್ಲ. ತಾನು ಇಷ್ಟು ಮಾತನಾಡಿಯೂ ಲಕ್ಷ್ಮಿ ಒಂದು ಮಾತನ್ನೂ ಆಡದಿರಲು—

"ನಾನು ಹೇಳಿದ್ದು ತಿಳಿಯಿತೆ ಲಕ್ಷ್ಮಿ? ನಾಳೆ ಒಂದು ದಿನ...." ಎಂದು ಲಕ್ಷ್ಮಿಯ ಕಡೆ ತಿರುಗಿ ನೋಡಿದ, ದಿಗಿಲುಬಿದ್ದ. ಲಕ್ಷ್ಮಿ ಕಣ್ಣು ಮುಚ್ಚಿಕೊಂಡು, ಯಾವುದರ ಅರಿವೂ ಇಲ್ಲದೆ ತನ್ನನ್ನೆ ನೆಮ್ಮಿ ನಿಂತಿದ್ದಳು.

"ಲಕ್ಷ್ಮೀ, ಲಕ್ಷ್ಮೀೀ, ಲಕ್ಷ್ಮೀೀೀ!" ಎಂದು ಒಂದೇ ಸಮನೆ ಕೂಗಿದ: ಲಕ್ಷ್ಮಿಗೆ ಎಚ್ಚರವಿರಲಿಲ್ಲ!

ಮಗುವನ್ನು ಎತ್ತಿಕೊಳ್ಳುವಂತೆ ಲಕ್ಷ್ಮಿಯನ್ನು ಎತ್ತಿಕೊಂಡು ಹೋಗಿ ಅವಳ ಹಾಸಿಗೆಯ ಮೇಲೆ ಮಲಗಿಸಿದ. ಮನೆಯಲ್ಲಿ ಯಾರೂ ಇಲ್ಲ. ಈ ಸ್ಥಿತಿಯಲ್ಲಿ ಅವಳೊಬ್ಬಳನ್ನೇ ಬಿಟ್ಟು ವೈದ್ಯರನ್ನು ಕರೆದುಕೊಂಡು ಬರಲು ಹೋಗುವುದಾದರೂ ಹೇಗೆ? ತನಗೆ ತೋರಿದಂತೆ ತಾನೇ ಶೈತ್ಯೋಪಚಾರ ಮಾಡಿದ. ಅವಳ ನಾಡಿ ಹಿಡಿದು ನೋಡಿದ! ಮೆಲ್ಲಗೆ ಆಡುತ್ತಿತ್ತು ಕಾಲು ಸ್ವಲ್ಪ ತಣ್ಣಗಿತ್ತು! ಆದರೂ ಬೆಚ್ಚನೆಯ ಉಸಿರು ಬಿಡುತ್ತಿದ್ದಳು. ಶ್ರೀಕಾಂತನ ಮನಸ್ಸಿಗೆ ಸ್ವಲ್ಪ ಧೈರ್ಯವಾಯಿತು. ಅವಳಿಗೆ ಗಾಳಿ ಹಾಕುತ್ತ ಬಹಳ ಹೊತ್ತು ಅವಳ ಪಕ್ಕದಲ್ಲಿಯೆ ಕುಳಿತಿದ್ದ. ಒಮ್ಮೆ ಅವಳ ಕೈ ಹಿಡಿದು ಕೊಳ್ಳುತ್ತಿದ್ದ; ಒಮ್ಮೆ ಅವಳ ಕುರುಳು ನೇವರಿಸುತ್ತಿದ್ದ; ಒಮ್ಮೆ ಅವಳ ಹಣೆ ಮುಟ್ಟಿನೋಡುತ್ತಿದ್ದ; ಒಮ್ಮೆ ಅವಳ ಕಾಲು ತೀಡುತ್ತಿದ್ದ; ಒಮ್ಮೆ ಅವಳ ಕಪೋಲಗಳನ್ನು ಬಹಳ ಮೃದುವಾಗಿ ಸ್ಪರ್ಶಿಸುತ್ತಿದ್ದ. ಚಿತ್ರ ಬರೆಯುವಂದು ಯಾವ ಒಂದು ಆನಂದ ದೊರಕುತ್ತಿತ್ತೊ ಅದೇ ಬಗೆಯ, ಅದಕ್ಕಿಂತ ಹೆಚ್ಚಿನ ಆನಂದ ಈಗ ತನಗೆ ಆಗುತ್ತಿರುವಂತೆ ಅವನಿಗೆ ಭಾಸವಾಯಿತು. ಲಕ್ಷ್ಮಿಗೆ ಈಗ ಪ್ರಜ್ಞೆ ಇದ್ದಿದ್ದರೆ ತನ್ನ ವರ್ತನೆ ಕಂಡು ಎಷ್ಟು ಆನಂದ ಪಡುತ್ತಿದ್ದಳು! ಅವಳು ಸ್ವಸ್ಥಳಾಗಿದ್ದಾಗ ತನ್ನ ಪ್ರೇಮ ಭಾವವನ್ನೆಲ್ಲ ಅಡಗಿಸಿಟ್ಟುಕೊಂಡು, ಅವಳ ಪ್ರೇಮಭಾವವನ್ನು ಅದುಮಿ ಹಿಡಿದು, ಅವಳಿಗೂ ಮೋಸಮಾಡಿ ತನಗೂ ಮೋಸಮಾಡಿಕೊಂಡಿದ್ದುದಾಗಿ ಅವನಿಗೆ ತೋರಿತು. ಇನ್ನು ಹಾಗೆ ಮಾಡುವುದಿಲ್ಲ; ದೇವರ ದಯದಿಂದ ಅವಳು ಬೇಗನೆ ಚೇತರಿಸಿಕೊಳ್ಳಲಿ! ಅಲ್ಲಿಯವರೆಗೂ ಚಿತ್ರಕ್ಕೆ ಕೈಹಾಕು ವುದೇ ಇಲ್ಲ! ಅದಕ್ಕೆ ತೆರೆಹಾಕಿಬಿಡುತ್ತೇನೆ—ಎಂದು ನಿಶ್ಚಯಿಸಿದ ಶ್ರೀಕಾಂತ.

ಅಷ್ಟು ಹೊತ್ತಿಗೆ ಲಕ್ಷ್ಮಿಗೆ ಕೊಂಚ ಕೊಂಚ ಪ್ರಜ್ಞೆ ಬಂದಹಾಗಿತ್ತು. ಅರೆಗಣ್ಣು ಬಿಟ್ಟುಕೊಂಡಿದ್ದಳು.

"ಲಕ್ಷ್ಮೀ" ಎಂದ ಶ್ರೀಕಾಂತ.

ಮಾತಿಲ್ಲ! ಆದರೆ ಲಕ್ಷ್ಮಿ ಸ್ವಲ್ಪ ದೊಡ್ಡದಾಗಿ ಕಣ್ಣುಬಿಟ್ಟು ನೋಡಿದಳು. ಅಷ್ಟೊಂದು ದುರ್ಬಲಳಾಗಿದ್ದ ಲಕ್ಷ್ಮಿಯು ನೋಟದಲ್ಲಿ ಯಾವ ಭಾವವಿತ್ತು ಎಂಬುದನ್ನು ಪ್ರೇಮಿಯಾಗಿದ್ದ ಶ್ರೀಕಾಂತ ಅನುಭವಿಸದೆ ಹೋಗಿರಲಾರ.

"ಲಕ್ಷ್ಮೀ, ಲಕ್ಷ್ಮೀ" ಎಂದ ಮತ್ತೆ, ಪ್ರೇಮಪೂರಿತವಾದ ಧ್ವನಿಯಲ್ಲಿ.

ಲಕ್ಷ್ಮಿ ಅದೇ ನೋಟವನ್ನು ಬೀರುತ್ತಿದ್ದಳು. ಅವಳ ಸಪ್ಪಲತೆಯಲ್ಲಿ ನೀರವತೆಯಲ್ಲಿ ಬೇಕಾದಷ್ಟು ಅರ್ಥ ತುಂಬಿ ತುಳುಕುತ್ತಿತ್ತು.

"ಕುಡಿಯುವುದಕ್ಕೆ ಹಾಲು ಕೊಡಲೆ, ಲಕ್ಷ್ಮಿ?"

"ಬೇಡ" ಎನ್ನುವಂತೆ ಮೆಲ್ಲನೆ ತಲೆ ಅಲ್ಲಾಡಿಸಿದಳು.

"ನೀರು ಬೇಕೆ?"

"ಹುಂ, ಬೇಕು" ಎನ್ನುವಂತೆ ಬಾಯಿ ಚಪ್ಪರಿಸಿದಳು. ಶ್ರೀಕಾಂತ ಸ್ವಲ್ಪ ನೀರು ಕುಡಿಸಿದ.

ಸಂಜೆಯಾಗಿತ್ತು. ಲಕ್ಷ್ಮಿ ಹಾಗೆಯೇ ನಿದ್ದೆ ಹೋಗುತ್ತಿದ್ದಂತೆ ಮಲಗಿದ್ದಳು ಶ್ರೀಕಾಂತ ಧೈರ್ಯಮಾಡಿ, ಮನೆಗೆ ಹೊರಗಡೆ ಬೀಗ ಹಾಕಿಕೊಂಡು ಹೊರಟು, ಒಬ್ಬ ವೈದ್ಯರನ್ನು ಕರೆದುಕೊಂಡು ಬಂದು ತೋರಿಸಿದ. ಅವರು ಅವಳನ್ನು ಚೆನ್ನಾಗಿ ಪರೀಕ್ಷೆಮಾಡಿ, ಅತ್ಯಂತ ದಾರುಣವಾದ ಮಾನಸಿಕ ಮತ್ತು ಶಾರೀರಕ ದೌರ್ಬಲ್ಯಗಳ ಪರಿಣಾಮ ಅದೆಂದೂ, ಹೃದಯವೂ ಕೊಂಚ ದುರ್ಬಲವಾಗಿದೆಯೆಂದೂ, ಇನ್ನು ಎರಡು ಮೂರು ತಿಂಗಳಾದರೂ ಸಂಪೂರ್ಣ ವಿಶ್ರಾಂತಿ ಕೊಡಬೇಕೆಂದೂ, ಇನ್ನು ಯಾವ ಬಗೆಯ ರೋಗವೂ ಇಲ್ಲವೆಂದೂ ತಿಳಿಸಿದರು.

ಮಾರನೆಯ ದಿನ ಬೆಳಗ್ಗೆ ಶ್ರೀಕಾಂತ ಮುಗಿಯುತ್ತ ಬಂದಿದ್ದ ಚಿತ್ರಕ್ಕೆ ತೆರೆಹಾಕಿ ಮುಚ್ಚಿಬಿಟ್ಟ!

ವಾರವಾಯಿತು; ಎರಡು ವಾರವಾಯಿತು; ಮೂರಾಯಿತು. ತಿಂಗಳಾಗುತ್ತ ಬಂತು. ಲಕ್ಷ್ಮಿಯ ಸ್ಥಿತಿ ಇದ್ದಹಾಗೆಯೇ ಇತ್ತು.

೧೪

ಶ್ರೀಕಾಂತ ಒಂದೊಂದಾಗಿ ತನ್ನ ಚಿತ್ರಗಳನ್ನೆಲ್ಲ ಹೋದಷ್ಟು ಬೆಲೆಗೆ ಮಾರಿ, ಬಂದ ಹಣವನ್ನೆಲ್ಲ ಲಕ್ಷ್ಮಿಯ ಔಷಧೋಪಚಾರಗಳಿಗೆ ವೆಚ್ಚ ಮಾಡುತ್ತಿದ್ದ. ತನಗಾಗಿ ಹೆಚ್ಚು ಏನನ್ನೂ ವೆಚ್ಚಮಾಡುತ್ತಿರಲಿಲ್ಲ. ಒಂದೊಂದು ದಿನ ಬರಿಯ ಅನ್ನ ಜೇಯಿಸಿಕೊಂಡು ತಿನ್ನುತ್ತಿದ್ದ; ಒಂದೊಂದು ದಿನ ಹೋಟೆಲಿನಲ್ಲಿ ಊಟಮಾಡುತ್ತಿದ್ದ. ಎಷ್ಟೋ ದಿನ ರಾತ್ರಿ ಉಪವಾಸಮಾಡಿಬಿಡುತ್ತಿದ್ದ. ಪ್ರತಿದಿನ ರಾತ್ರೆ ಬಹಳ ಹೊತ್ತು ಲಕ್ಷ್ಮಿಯ ಬಳಿಯೆ ಕುಳಿತಿರುತ್ತಿದ್ದ. ಹೀಗೆ, ಹೊತ್ತುಹೊತ್ತಿಗೆ ಅನ್ನ ನಿದ್ರೆಯಿಲ್ಲದೆ, ತನ್ನ ಚಿತ್ರಕಲೆಯ ಕೆಲಸಕ್ಕೆ ಮನಸ್ಸು ಕೊಡಲು ಆಗದೆ, ಲಕ್ಷ್ಮಿಯ ಸಹವಾಸವೂ ಇಲ್ಲದೆ, ಅವನೂ ಕೃಶನಾಗುತ್ತಾ ಬಂದ. ಅವನ ನಿತ್ಯ ಜೀವನದಲ್ಲಿ ಏನೋ ಮಂಕು ಕವಿದಂತಾಗಿತ್ತು. ಆದರೂ ಲಕ್ಷ್ಮಿಯ ಶುಶ್ರೂಷೆಯಲ್ಲಿಯೇ ಅವನು ಒಂದು ಬಗೆಯ ಹರ್ಷ ತೃಪ್ತಿಗಳನ್ನು ಪಡೆಯುತ್ತಿದ್ದ. ಆವಳು ಗುಣಹೊಂದಿ ಬದುಕಿದರೆ—ಬದುಕಿಯೇ ಬದುಕುತ್ತಾಳೆ ಎಂದುಕೊಂಡ—ಬದುಕಿದರೆ,........ಎಂದು ಏನೇನೋ ಸವಿಗನಸುಗಳನ್ನು ಕಾಣತೊಡಗಿದ.

೧೫

ತಿಂಗಳ ಮೇಲಾಯಿತು; ಒಂದು ದಿನ ಶ್ರೀಕಾಂತನಿಗೆ ಮಧ್ಯರಾತ್ರಿಯಲ್ಲಿ 'ರತಿ'ಯ ಕನಸಾಯಿತು: ರತಿ ತನ್ನನ್ನು ಕರೆಯುತ್ತಿದ್ದಾಳೆ; ಬಹುಕಾಲ ಮರೆತದ್ದಕ್ಕಾಗಿ ಕೋಪಗೊಂಡಿದ್ದಾಳೆ! ಬಿಟ್ಟು ಹೊರಟುಹೋಗುತ್ತೇನೆಂದು ಹೆದರಿಸುತ್ತಿದ್ದಾಳೆ....ಶ್ರೀಕಾಂತನಿಗೆ ಎಚ್ಚರವಾಯಿತು. ಕನಸು ಅಳಿಸಿ ಹೋಗಿರಲಿಲ್ಲ. ಕನಸಿನ ಚಿತ್ರ ಮತ್ತೆ ಕಣ್ಮುಂದೆ ಸುಳಿಯಿತು. ಶ್ರೀಕಾಂತನಿಗೆ ತಾನು ತೆರೆಹಾಕಿದ್ದ ಚಿತ್ರವನ್ನು ಒಮ್ಮೆ ತೆಗೆದು ನೋಡಬೇಕೆನಿಸಿತು. ಮಹಡಿಯ ಮೇಲಕ್ಕೆ ಹೋಗಲು ಎದ್ದ. ಹೋಗುವ ಮುನ್ನ ಒಮ್ಮೆ ಲಕ್ಷ್ಮಿಯ ಕಡೆ ತಿರುಗಿ ನೋಡಿದ. ನಿದ್ದೆ ಮಾಡುತ್ತಿದ್ದಳು;

ಮಂದವಾದ ದೀಪದ ಬೆಳಕಿನಲ್ಲಿ, ರೋಗಗ್ರಸ್ತಳಾಗಿದ್ದರೂ ಅವಳ ಮುಖ ಅದೊಂದು ಬಗೆಯ ಅಪೂರ್ವ ತೇಜಸ್ಸಿನಿಂದ ಕಾಣುತ್ತಿತ್ತು; ತಾನು ಕನಸಿನಲ್ಲಿ ಕಂಡ 'ರತಿ'ಯ ಮುಖದಲ್ಲಿ ಅದೇ ಬಗೆಯ ತೇಜಸ್ಸು ಇದ್ದುದು ನೆನಪಿಗೆ ಬಂತು.

ಶ್ರೀಕಾಂತ ಬೇಗನೆ ತನ್ನ ಚಿತ್ರಶಾಲೆಗೆ—ಅಲ್ಲ, ಒಂದೆ ಚಿತ್ರಗಳಿದ್ದ ಶಾಲೆಗೆ—ಹೋದ. ದೀಪ ಹೊತ್ತಿಸಿ, ತೆರೆಹಾಕಿದ್ದ ಒಂಟಿ ಚಿತ್ರದ ಬಳಿಗೆ ಹೋದ. ತೆರೆಯ ಮೇಲೆ ಬೇಕಾದಷ್ಟು ಧೂಳು ಕೂತಿತ್ತು. ಮೆಲ್ಲಗೆ ತೆರೆ ತೆಗೆದ. ತಾನು ತಿಂಗಳ ಹಿಂದೆ ಮುಗಿಸದೆ ಬಿಟ್ಟಿದ್ದ ರತಿಯ ಚಿತ್ರ ಕಣ್ಣೆದುರಿಗೆ ಕಂಗೊಳಿಸುತ್ತಿತ್ತು. ಚಿತ್ರವನ್ನು ಒಂದೇ ಸಮನೆ ದಿಟ್ಟಿಸಿ ನೋಡುತ್ತ ನಿಂತ: ರತಿಗೆ ಜೀವಕಳೆ ಬಂದಂತಾಯಿತು; ತುಟಿ ಅಲುಗಿದಂತಾಯಿತು; ಮಾತಾಡುತ್ತಿದ್ದಂತೆ ತೋರಿತು. ಶ್ರೀಕಾಂತ ಭ್ರಾಂತನಾಗಿ ಆಲಿಸುವಂತೆ ನಿಂತ.

ಚಿತ್ರಬಂಧಿತ ರತಿ ಇಂತು ಹೇಳುವಂತೆ ಶ್ರೀಕಾಂತನಿಗೆ ಭಾಸವಾಯಿತು:

"ಶ್ರೀಕಾಂತ! ನನ್ನ ನಲ್ಮೆಯ ಚಿತ್ರಗಾರ! ನನ್ನ ದರ್ಶನಾಭಿಲಾಷೀ! ನನ್ನನ್ನು ಏಕೆ ಉದಾಸೀನ ಮಾಡುತ್ತಿದ್ದೀಯೆ? ನಿನ್ನ ಹೃದಯಮಂದಿರದಿಂದ ನನ್ನನ್ನು ತಳ್ಳಿ ಈ ಚಿತ್ರದಲ್ಲಿ ಬಂಧಿಸಿರುತ್ತೀಯೆ? ಈ ಚಿತ್ರದಲ್ಲಿ ನನ್ನನ್ನು ಜೀವಮೂರ್ತಿಯಾಗಿ ಇರಿಸಲು ನಿನಗೆ ಇಷ್ಟವಿಲ್ಲ. ಇಷ್ಟವಿಲ್ಲದಿದ್ದರೆ ಬಿಟ್ಟುಬಿಡು. ಹಾಗೆಂದು ತಿಳಿಸು ಹೊರಟುಹೋಗುತ್ತೇನೆ. ಬೇರೆ ಯಾರನ್ನಾದರೂ ಆಶ್ರಯಿಸುತ್ತೇನೆ. ಶ್ರೀಕಾಂತ! ಸುಮ್ಮನೆ ಏಕೆ ಯೋಚಿಸುತ್ತ ನಿಂತಿರುವೆ? ನಿನ್ನ ಹೃದಯವನ್ನು ನಾನು ಕಾಣೆನೆ? ನಿನಗೆ ಲಕ್ಷ್ಮಿಯೂ ಬೇಕು, ನಾನೂ ಬೇಕು. ನನ್ನನ್ನು ಇಷ್ಟು ದಿನ ಮರೆತಿದ್ದರೂ ನನ್ನನ್ನು ಬಿಡಲಾರೆ ನೀನು. ಶ್ರೀಕಾಂತ, ಇದು ಸಾಧ್ಯವಿಲ್ಲ. ಇಬ್ಬರನ್ನೂ ಪಡೆಯಲು ಸಾಧ್ಯವಿಲ್ಲ. ನನಗಾಗಿ ಲಕ್ಷ್ಮಿಯನ್ನು ಬಲಿ ಕೊಡಲು ಸಿದ್ಧವಾಗಿದ್ದೆಯಲ್ಲವೆ ನೀನು?........ಮೌನವೇಕೆ? ಹೌದು ಎನ್ನು....ಈಗಲೂ ........ಲಕ್ಷ್ಮಿಯನ್ನು........ಆಗುವುದಿಲ್ಲವೇನು? ಹಾಗಾದರೆ ಲಕ್ಷ್ಮಿಗಾಗಿ ನನ್ನನ್ನು....ಹೌದು ಶ್ರೀಕಾಂತ....ನಾನು ಹೇಳುವುದು ಸುಳ್ಳಲ್ಲ....ಲಕ್ಷ್ಮಿಯ ಜೀವ ನನ್ನಲ್ಲಿ....ನನ್ನ ಜೀವ ಲಕ್ಷ್ಮಿಯಲ್ಲಿ....ಲಕ್ಷ್ಮಿಯ ಜೀವಸಾರವನ್ನೆಲ್ಲ

ನನ್ನಲ್ಲಿ ತುಂಬಿರುತ್ತೀಯೆ....ಅವಳಲ್ಲಿ ಉಳಿದಿರುವ ಅಲ್ಪ ಜೀವವನ್ನೂ ನನ್ನಲ್ಲಿ ತುಂಬಿಬಿಟ್ಟರೆ ನಾನು ಜೀವಂತಮೂರ್ತಿಯಾಗುತ್ತೇನೆ. ಲಕ್ಷ್ಮಿ ನನ್ನಲ್ಲಿ ಐಕ್ಯತೆ ಹೊಂದುತ್ತಾಳೆ. ನನ್ನನ್ನೆ ಲಕ್ಷ್ಮಿಯೆಂದು ತಿಳಿ....ಇಲ್ಲವೆ....ನನ್ನಲ್ಲಿ ತುಂಬಿರುವ ಈ ಅಳಿ ಜೀವ ತೆಗೆದುಹಾಕಿ ಅರೆಜೀವವಾಗಿರುವ ಲಕ್ಷ್ಮಿಯಲ್ಲಿ ತುಂಬು....ಅವಳನ್ನು ಬದುಕಿಸು....ಅವಳೇ ನಿನ್ನ 'ರತಿ'ಯಾಗಿರುತ್ತಾಳೆ.... ಏಕೆ ಸುಮ್ಮನಿದ್ದೀಯೆ? ಯಾವುದಾದರೂ ನಿಶ್ಚಯ ಮಾಡು, ಬೇಗ...."

ಶ್ರೀಕಾಂತನಿಗೆ ಏನೋ ಉತ್ಸಾಹ ಬಂದಂತಾಯಿತು. ಉತ್ಸಾಹದ ಭರದಲ್ಲಿ ತನಗೆ ತಾನೇ ಹೀಗೆ ಹೇಳಿಕೊಂಡ:

"ರತಿ, ನಿನ್ನನ್ನು ಬಿಡಲಾರೆ. ಲಕ್ಷ್ಮಿಯನ್ನೂ ಬಿಡಲಾರೆ. ಇದೋ ನೋಡು. ಬೆಳಗಾಗುವದರೊಳಗಾಗಿ ನಿನ್ನನ್ನು ಜೀವಂತಮೂರ್ತಿಯಾಗಿ ಮಾಡುತ್ತೇನೆ ನನ್ನ ಸಾಮರ್ಥ್ಯವನ್ನಾದರೂ ನೋಡು, ಇಬ್ಬರನ್ನೂ ಪಡೆಯುತ್ತೇನೆ" ಎಂದು ಎಲ್ಲೆಲ್ಲೋ ಹಾಕಿದ್ದ ಬಣ್ಣ ಕುಂಚ ಮುಂತಾದ ಸಾಮುಗ್ರಿಗಳನ್ನೆಲ್ಲ ಬೇಗಬೇಗನೆ ಸಿದ್ಧಪಡಿಸಿಕೊಂಡು, ಇನ್ನೊಂದು ದೀಪ ಹೊತ್ತಿಸಿ, ಚಿತ್ರವನ್ನು ಪೂರೈಸತೊಡಗಿದ.

ಬೆಳಗಿನ ಜಾವ ಎರಡಾಯಿತು, ಮೂರಾಯಿತು, ನಾಲ್ಕಾಗುತ್ತ ಬಂತು. ಶ್ರೀಕಾಂತ ಇನ್ನೇನು ಚಿತ್ರವನ್ನು ಪೂರೈಸುವುದರಲ್ಲಿದ್ದ. ಅವನು ಎರಡು ಮೂರು ದಿನ ಮಾಡುವ ಕೆಲಸವನ್ನು ಎರಡು ಮೂರು ಗಂಟೆಗಳಲ್ಲಿ, ಅದೂ ರಾತ್ರಿಯ ವೇಳೆ ನಿದ್ದೆಯ ಹೊತ್ತಿನಲ್ಲಿ, ಸಾಧಿಸಿದ್ದ. ತಾನು ಕನಸಿನಲ್ಲಿ ಕಂಡಿದ್ದ ರತಿಯ ಮುಖದಲ್ಲಿ ಯಾವ ಕಾಂತಿಯಿತ್ತೊ, ತಾನು ಇಲ್ಲಿಗೆ ಬರುವ ಮುನ್ನ ನೋಡಿದ್ದ ಲಕ್ಷ್ಮಿಯ ಮುಖದಲ್ಲಿ ಯಾವ ತೇಜಸ್ಸಿತ್ತೊ ಅವೆರಡೂ ಮಿಳಿತವಾಗಿ ಚಿತ್ರದಲ್ಲಿ ಮೂಡಿ ಬರುತ್ತಿದ್ದಂತೆ ಕಂಡಿತು.

ಚಿತ್ರ ಬರೆಯುತ್ತಿದ್ದಂತೆ, ರತಿ ಮತ್ತೊಮ್ಮೆ ನುಡಿದಂತಾಯಿತು: "ನಾನು ಹೇಳಿದ್ದನ್ನು ನೆನಪಿಗೆ ತಂದುಕೊ. ನೀನು ಯೋಚಿಸುವುದು ಸಾಧ್ಯವಿಲ್ಲ. ಲಕ್ಷ್ಮಿಯ ಜೀವ ಸಂಪೂರ್ಣವಾಗಿ ನನ್ನಲ್ಲಿ ತುಂಬಿಕೊಳ್ಳುತ್ತ ಬರುತ್ತಿದೆ. ಇನ್ನೂ ಕಾಲ ಮೀರಿಲ್ಲ. ಅದೋ ನೋಡು, ಆ ಚೂರಿ ತೆಗೆದುಕೊ ಲಕ್ಷ್ಮಿ ಬೇಕಾದರೆ, ನನ್ನನ್ನು ಬಲಿಕೊಡು. ಈ ಮೀನ ಮೇಷದಿಂದ ಪ್ರಯೋಜನವಿಲ್ಲ. ಸಿದ್ಧನಾಗು...."

ಶ್ರೀಕಾಂತನಿಗೆ ತನ್ನ ಒಂದು ಕಲ್ಪನೆಯೇ ರತಿಯ ನುಡಿಯಾಗಿ ತನಗೆ ಕೇಳುತ್ತಿದೆ ಎಂಬುದು ತಿಳಿದು, ನಗೆ ಬಂದಿತು; ಗಹಗಹಿಸಿ ನಕ್ಕು ಚಿತ್ರದ ಕೆಲಸವನ್ನು ಮುಂದುವರಿಸಿದ. ಅದು ಇನ್ನು ಒಂದೆರಡು ನಿಮಿಷಗಳಲ್ಲಿ ಪೂರೈಸುವಂತಿತ್ತು.

"ಶ್ರೀಕಾಂತಾ" ಎಂದು ಲಕ್ಷ್ಮಿ ಚೀರಿದಂತಾಯಿತು.

"ಶ್ರೀಕಾಂತಾ, ಇನ್ನು ಲಕ್ಷ್ಮಿಯ ಆಸೆ ಬಿಡು. ಇದೋ, ನಾನು ಮೈವೆತ್ತು ಬಂದಿದ್ದೇನೆ. ಇನ್ನು ನನ್ನನ್ನು ಸ್ವೀಕರಿಸಬಹುದು. ಸಿದ್ಧಳಾಗಿದ್ದೇನೆ...." ಎಂದು ಚಿತ್ರದ ರತಿ ನುಡಿದಳು.

ಶ್ರೀಕಾಂತನಿಗೆ ಮೈ ಜುಮ್ಮೆಂದಿತು; ಸಂಪೂರ್ಣವಾಗಿ ಮುಗಿದಿದ್ದ ರತಿಯ ಚಿತ್ರವನ್ನು ದಿಟ್ಟಿಸಿ ನೋಡುತ್ತಿದ್ದವನು, ಹಾಗೆಯೇ ಕಣ್ಣುಮುಚ್ಚಿ ಕುಳಿತ. ಇದ್ದಕ್ಕಿದ್ದಹಾಗೆ ರೋಷಗೊಂಡು ಎದ್ದ. ಕುಂಚ ಬಿಸುಟು ಚೂರಿಯನ್ನು ತೆಗೆದುಕೊಂಡು, ಅದನ್ನು ಭದ್ರಮುಷ್ಟಿಯಲ್ಲಿ ಹಿಡಿದು, ತುಟಿ ಕಚ್ಚಿ, ನಟ್ಟ ನೋಟದಿಂದ, ಚೂರಿಯನ್ನು ಚಿತ್ರಪಟದ ಒಂದು ಮೇಲು ಮೂಲೆಗೆ ಚುಚ್ಚಿ, ಅದನ್ನು ಇನ್ನೇನು ಸರ್ರನೆ ಸೀಳಿಹಾಕಬೇಕು....ಎದೆ ಡವಡವ ಎನ್ನತೊಡಗಿತು; ಉಸಿರು ಬೇಗಬೇಗನೆ ಆಡಹತ್ತಿತು....ಅಷ್ಟರಲ್ಲಿ ಕೈ ಅಲ್ಲಿಗೇ ನಿಂತಿತು. ತಾನು ಮಾಡ ಹೋಗುತ್ತಿರುವುದು ಎಂಥ ಹುಚ್ಚು ಕೆಲಸ! ಈ ಚಿತ್ರದಲ್ಲಿ ಲಕ್ಷ್ಮಿಯ ಆತ್ಮ, ತನ್ನ ಸಾಧನೆ–ಕಲೆಯ ಆತ್ಮ–ಎರಡೂ ಜೊತೆಗೂಡಿ ಮೂಡಿವೆ! ಇಂಥ ಅಮೋಘ ಚಿತ್ರವನ್ನು ಪ್ರಪಂಚಕ್ಕೆ ಇಲ್ಲದಂತೆ ಮಾಡುವುದು ಆತ್ಮದ್ರೋಹ, ತನ್ನ ಉದ್ದೇಶಕ್ಕಾಗಿ ಯಾರು ತನ್ನನ್ನು ತಾನು ಬಲಿಕೊಟ್ಟುಕೊಂಡಿದ್ದಳೋ ಆ ಲಕ್ಷ್ಮಿಗೆ ದ್ರೋಹ, ಪ್ರಪಂಚಕ್ಕೇ ದ್ರೋಹ–ಎಂದು ತಟ್ಟನೆ ತೋರಿ, ಕೈಯನ್ನು ಮೇಲಕ್ಕೆತ್ತಿದ....ಚೂರಿ ಇನ್ನೂ ಕೈಹಿಡಿತದಲ್ಲೇ ಇತ್ತು....ತನ್ನ ಕಲಾಜೀವನಕ್ಕೆ ಇಂದೇ ಕೊನೆ ದಿನ....ಇನ್ನು ತನ್ನ ಒಲವಿನ ಮೂರ್ತಿ....ಲಕ್ಷ್ಮಿ....

ಶ್ರೀಕಾಂತ ಭಗ್ಗನೆ ಕೆಳಕ್ಕೆ ಇಳಿದು ಹೋದ. ಲಕ್ಷ್ಮಿಯ ಪಕ್ಕದಲ್ಲಿ ಕುಳಿತ. "ಲಕ್ಷ್ಮೀ, ಲಕ್ಷ್ಮೀ" ಎಂದು ಮೂರು ನಾಲ್ಕು ಸಲ ಕೂಗಿದ. ಮತ್ತೆ ಮೂರು ನಾಲ್ಕು ಸಲ ಕೂಗಿದ. ಪುನಃ ದೀಪ ದೊಡ್ಡದುಮಾಡಿ,

ಮುಖ ದಿಟ್ಟಿಸಿ ನೋಡಿದ. ತಾನು ಚಿತ್ರ ಬರೆಯಲು ಮೇಲಕ್ಕೆ ಹೋಗುವ ಮುನ್ನ ಹೇಗಿದ್ದಳೋ ಹಾಗೆಯೇ ಇದ್ದಳು ಲಕ್ಷ್ಮಿ—ಮುಖದಲ್ಲಿ ಅದೇ ಕಾಂತಿ, ಶಾಂತಿ. ನಿದ್ದೆಯಿರಬಹುದೆಂದು ಮೆಲ್ಲನೆ ಅವಳ ಕೈ ಹಿಡಿದುಕೊಂಡ; ತಣ್ಣಗಿತ್ತು. ಶ್ರೀಕಾಂತನಿಗೆ ಗಾಬರಿಯಾಯಿತು. ಕಾಲು ಮುಟ್ಟಿ ನೋಡಿದ; ತಣ್ಣಗಿತ್ತು.

ಒಲವಿಗಾಗಿ ಕಲೆಯನ್ನು ಬಲಿಕೊಡಹೋಗಿದ್ದ—ಕ್ಷಣದ ಹಿಂದೆ; ಆದರೆ ಅದಕ್ಕಿಂತ ಮೊದಲೆ ಕಲೆಗಾಗಿ ಒಲವನ್ನು ಬಲಿಕೊಟ್ಟಿದ್ದುದರ ಅರಿವು ಶ್ರೀಕಾಂತನಿಗೆ ಈಗ, ಕಾಲ ಮೀರಿದ ಮೇಲೆ, ಉಂಟಾಯಿತು.

ಶ್ರೀಕಾಂತ ತನಗಾಗಿ, ತನ್ನ ಕಲೆಗಾಗಿ ಲಕ್ಷ್ಮಿಯು ಆತ್ಮತ್ಯಾಗವನ್ನು ನೆನೆದಾಗ ತನ್ನ ಪ್ರೇಮತ್ಯಾಗ ತುಚ್ಛವಾಗಿ ಕಂಡಿತವನಿಗೆ. ಹುತಾತ್ಮಳಾದ ಲಕ್ಷ್ಮಿಯ ತಣ್ಣನೆಯ ತುಟಿಗಳನ್ನು ಪ್ರೇಮಪೂರ್ವಕವಾಗಿ ಚುಂಬಿಸಿದ

ಚಿತ್ರವನ್ನು ಸಂಪೂರ್ಣವಾಗಿ ನಾಶಪಡಿಸಿದ್ದರೆ ಲಕ್ಷ್ಮಿ ಬದುಕಿರುತ್ತಿದ್ದಳೋ ಏನೋ! ಲಕ್ಷ್ಮಿಯ ಜೀವವನ್ನು ತಾನು ಹೀರಿ ಬಣ್ಣಗಳ ಮೂಲಕ 'ಚಿತ್ರದ ರತಿ'ಗೆ ಎರೆದಿದ್ದರಿಂದಲ್ಲವೆ ತನ್ನ 'ಜೀವಂತ ರತಿ' ಸತ್ತು ಹೋದದ್ದು! ಅವಳ ಸಾವಿಗೆ ಕಾರಣ ತಾನು!....ಇದ್ದಕ್ಕಿದ್ದಂತೆ ಬೇರೆ ಯೋಚನೆ ಹೊಳೆಯಿತು. ತಟ್ಟನೆ ಎದ್ದು ಮಹಡಿಯ ಮೇಲಕ್ಕೆ ಹೋದ.... ಮೈಮರವಿನಲ್ಲಿ, ಹಿಡಿದ ಚೂರಿ ಹಿಡಿದಂತೆಯೇ ಇತ್ತು, ಭದ್ರಮುಷ್ಟಿಯಲ್ಲಿ.

ಹೋದವನು, 'ರತಿ ದೇವಿ'ಯ ಮುಂದೆ ಮೊಣಕಾಲೂರಿ ಕುಳಿತ. ದೀಪ ಮಂಕಾಗುತ್ತಿತ್ತು—ಕಿಟಕಿಯಿಂದ ಅರುಣಕಿರಣಗಳು ತೂರಿ ಬರುತ್ತಿದ್ದುದರಿಂದ ಶ್ರೀಕಾಂತ ಚಿತ್ರವನ್ನು ದಿಟ್ಟಿಸಿ ನೋಡಿದ: "ಲಕ್ಷ್ಮೀ, ನೀನು ಸತ್ತಿಲ್ಲ" ಎಂಬ ಮಾತುಗಳು ಅವನ ಬಾಯಿಂದ ಹೊರಟವು.

"ಲಕ್ಷ್ಮಿ ಸತ್ತು ಎಷ್ಟೋ ಕಾಲವಾಯಿತು. ಬದುಕಿರುವವಳು ನಾನು, ರತಿದೇವಿ." ಎಂದು ರತಿ ನಸುನಕ್ಕಳು.

"ಹೆಮ್ಮೆಪಡಬೇಡ, ರತಿ. ನಿನ್ನ ಬದುಕು ಸಾವು ನನ್ನ ಕೈಯಲ್ಲಿದೆ" ಎಂದು ಭದ್ರಮುಷ್ಟಿಯಲ್ಲಿ ಹಿಡಿದ ಚೂರಿಯನ್ನು ಮತ್ತಷ್ಟು ಭದ್ರವಾಗಿ ಹಿಡಿದ.

"ಏನು ! ಲಕ್ಷ್ಮಿಯನ್ನು ಸಾಯಿಸಿದ್ದು ಸಾಲದೆ ನನ್ನನ್ನೂ ಕೊಲ್ಲಲೆಳಸುವೆಯಾ ? ಅಥವಾ ರತಿಯಾಗಿ ಪುನರ್ಜನ್ಮ ಪಡೆದಿರುವ ಲಕ್ಷ್ಮಿಯನ್ನು ಮತ್ತೆ ಕೊಲ್ಲಬಯಸುವೆಯಾ ? ನೀನು ಕಲೆಗಾರನಲ್ಲ, ಕೊಲೆಗಾರ."

ಕೊಲೆಗಾರ ! ತಾನು ಕೊಲೆಗಾರನೆ ? ಹೌದು. ಚೂರಿ ಕೈಯಲ್ಲಿದೆ.... ಆದರೆ........

ಮಂಕಾಗಿ ಉರಿಯುತ್ತಿದ್ದ ದೀಪ ಆರಿತು. ಕಲ್ಲು ಬೊಂಬೆಯಂತೆ ಕುಳಿತಿದ್ದ ಶ್ರೀಕಾಂತನ ನಿಶ್ಚೇತನವಾದ ಕೈಗಳಿಂದ ಚೂರಿ ಜಗುಳಿ ಬಿತ್ತು.

ಲಕ್ಷ್ಮಿಯ ಕಳೇಬರವನ್ನು ಕಂಡು ದಿಗಿಲುಗೊಂಡ ಮಾಲಿ ಮೇಲಕ್ಕೆ ನುಗ್ಗಿಹೋಗಿ "ಬುದ್ಧೀ ಬುದ್ಧೀ" ಎಂದು ಅರಿಚಿಕೊಂಡ. ಎಷ್ಟು ಕೂಗಿದರೂ ಮಾತಿಲ್ಲ. ಶ್ರೀಕಾಂತ ರತಿಯ ಚಿತ್ರವಿದ್ದ ನಿಲವನ್ನೇ ತಬ್ಬಿ ಕುಳಿತಿದ್ದ. ಕೆಳಗೆ—ಚೂರಿ ಬಿದ್ದಿತ್ತು ! ಕೆಂಬಣ್ಣ ಚೆಲ್ಲಿತ್ತು ; ಕೆಂಬಣ್ಣವಲ್ಲ, ರಕ್ತ ಎಂದು ಅರಿವಿಗೆ ಬಂತು ಆಮೇಲೆ !

ಮೂಗುವಟ್ಟಿದ್ದ ಮಾಲಿ "ಇದೇನು....ಇಲ್ಲಿ .. ಲಕ್ಷ್ಮವ್ವ....ಚಿತ್ರ.... ರತಿ ಹಂಗಿದ್ಯಲ್ಲವ್ವ !" ಎಂದು ಉದ್ಗಾರ ತೆಗೆದ.

'ರತಿದೇವಿ' ನಸುನಗೆ ಬೀರುತ್ತಿದ್ದಳು. ಶ್ಮಶಾನ ವಾತಾವರಣದಲ್ಲಿ ಆ ನಸುನಗೆ ಜೀವದ ಅಂಕುರವನ್ನು ಮೊಳೆಯಿಸುತ್ತಿತ್ತು ; ಕಲೆಯ ಅಮರತ್ವವನ್ನು ಸಾರುತ್ತಿತ್ತು ; ಜೀವಿಗಳಿರ್ವರ ಆತ್ಮಾರ್ಪಣೆಯ ಸ್ಮಾರಕದ ಸೂಚಿಯಂತಿತ್ತು.

# ಕಡಲೆಪುರಿಯ ಕೆಂಪವ್ವ

ಏಳೆಂಟು ವರ್ಷ ಹಿಂದಿನ ಮಾತು. ಆಗತಾನೆ ಮೈಸೂರು ಟೌನ್‌ಹಾಲ್ ಬಳಿ 'ಕೃಷ್ಣ ಸಿನಿಮಾ' ಮೊದಲಾಗಿತ್ತು. ಸಿನಿಮಾ ಮಂದಿರದಲ್ಲಿ ಅಂದಿನ ಕಾರ್ಯಕ್ರಮ ಮೊದಲಾಗುವ ಮುನ್ನ ಕೆಲಹೊತ್ತು 'ಗ್ರಾಮ ಫೋನ್' ಹಾಕುತ್ತಿದ್ದರು. ದುಡ್ಡಿದ್ದವರು, ಇಷ್ಟವಿದ್ದವರು, ಸಿನಿಮಾಕ್ಕೆ ಹೋಗುತ್ತಿದ್ದರು. ದುಡ್ಡಿಲ್ಲದಿದ್ದವರು—ನನ್ನಂಥವರು—ಅನೇಕ ಮಂದಿ ವಿದ್ಯಾರ್ಥಿಗಳು—ಟೌನ್‌ಹಾಲ್ ಮೈದಾನದಲ್ಲಿ ಹಾಯಾಗಿ ಕುಳಿತು ಗ್ರಾಮಫೋನ್ ಕೇಳುತ್ತ

ಹರಟೆ ಹೊಡೆಯುತ್ತ ಕಾಲ ಕಳೆಯುತ್ತಿದ್ದರು. ಹೀಗೆ ಮೈದಾನದಲ್ಲಿ ಕಾಲ ಕಳೆಯಲು ಬರುತ್ತಿದ್ದವರು ನನ್ನಂಥ ಬಡ ವಿದ್ಯಾರ್ಥಿಗಳು ಮಾತ್ರವಲ್ಲ. ಬಡ ಗುಮಾಸ್ತರು ಕೆಲವರು, ಯಾವ ಕೆಲಸವೂ ಇಲ್ಲದೆ ಬೀದಿ ಬೀದಿ ಅಲೆಯುವ ಮಂದಿ, ತುಂಟ ಹುಡುಗರು—ಇವರೇ ಮುಂತಾದ ಮತ್ತು ನನಗೆ ಹೇಳಲು ಇಷ್ಟವಿಲ್ಲದ ಬಗೆಬಗೆಯ ಮಂದಿ ಅಲ್ಲಿ ನೆರೆಯುತ್ತಿದ್ದರು. ದಿನ ದಿನಕ್ಕೂ ಈ ಜನದ ನೆರವಿ ಬೆಳೆಯುತ್ತಿತ್ತು. ಗ್ರಾಮಫೋನ್ ಗಾನದ ಮೋಹಕತೆಗಿಂತ ಹೆಚ್ಚಾಗಿ ಅಲ್ಲಿ ನೆರೆಯುತ್ತಿದ್ದ ಜನಕ್ಕೆ ಸಂಜೆಯ ಹೊತ್ತಿನಲ್ಲಿ ಅಲ್ಲಿ ಬಂದು ಕುಳಿತಿದ್ದು ಹೋಗುವುದು ಒಂದು ಚಾಳಿಯಾಗಿ ಪರಿಣಮಿಸಿ ಹಾಗೆ ನೆರೆಯುತ್ತಿದ್ದರೆಂದು ತೋರುತ್ತದೆ. ನಾನೂ ನನ್ನ ಗೆಳೆಯನೂ ಆ ಚಾಳಿಗೆ ಬಲಿಬಿದ್ದಿದ್ದುದೇ ನನ್ನ ಹೇಳಿಕೆಗೆ ದೃಷ್ಟಾಂತ.

ಸರಿ, ಜನದ ನೆರವಿ ಸೇರಿದ ಕಡೆ ಇನ್ನು ಕೇಳಬೇಕೆ? ಕಡಲೆಕಾಯಿ ಮಾರುವವರು, ಹಣ್ಣುಮಾರುವವರು, ಹುರಿಗಾಳು ಮಾರುವವರು, ಮುಂತಾದ ಬಗೆಬಗೆಯ ತಿಂಡಿ ಮಾರುವ ವ್ಯಾಪಾರಗಾರರು ಅಲ್ಲಿಗೆ ಬಂದು ಮಾರಾಟಮಾಡುತ್ತಿದ್ದರು. ಒಂದೊಂದು ಕಾಲದಲ್ಲಿ ಕೆಲಕೆಲವು ಬಗೆಯ ತಿಂಡಿಯ ಮಾರಾಟದ ಹೊಡೆತ. ಉದಾಹರಣೆಗೆ, ಬೇಸಗೆಯಲ್ಲಿ 'ಬ್ರಾಹ್ಮಣರ' ಕೋಸುಂಬರಿ ಪಾನಕಕ್ಕೆ ಜೋರಾದ ವ್ಯಾಪಾರ; ಚಳಿಗಾಲದಲ್ಲಿ ಕಡಲೆಕಾಯಿ ಬೆಲ್ಲದ ಹೊಡೆತ. ಆದರೆ ಸಾರ್ವಕಾಲಿಕವಾಗಿ ಮಾರಾಟವಾಗುತ್ತಿದ್ದ ಒಂದು ಪದಾರ್ಥ ಎಂದರೆ 'ಗಂಜಾಂ ಪುರಿ–ಹುರಿಗಡಲೆ'. ಯಾರು ಏನೇ ಕೊಂಡುಕೊಳ್ಳಲಿ, ಬಹು ಮಂದಿ ಕಾಸಿಗೋ ಎರಡು ಕಾಸಿಗೋ ಮೂರು ಕಾಸಿಗೋ ಪುರಿ ಕೊಂಡು ತಿನ್ನದೆ ಇರುತ್ತಿರಲಿಲ್ಲ.

ಇದೇನು ಗಂಜಾಂಪುರಿಯ ಮಹಿಮೆ ಎಂದು ಯಾರಾದರೂ ಕೇಳಬಹುದು. ಬೆಂಗಳೂರಿನಲ್ಲಿ ಗಡಂಗು ಕಡಲೆಕಾಯಿ ಹೇಗೋ ಮೈಸೂರಿನಲ್ಲಿ ಗಂಜಾಂಪುರಿ, ಕಡಕೊಳದ ಕಡಲೆ ಹಾಗೆ ಪ್ರಸಿದ್ಧಿ. ಎಂಥ ಮಳೆಗಾಲವಾಗಲಿ ಇಲ್ಲಿನ ಪುರಿ ಒಳ್ಳೆ ಗರಿಗರಿ. 'ರತ್ನ' ಅವರ 'ಕಡಲೆಪುರಿ' ಪದ್ಯ ಎಲ್ಲೆಲ್ಲೂ ಹೆಸರಾಗಿದೆಯಷ್ಟೆ; ಅವರಿಗೆ ಆ ಪದ್ಯ ಬರೆಯಲು ಸ್ಫೂರ್ತಿ ಕೊಟ್ಟಿರುವುದು ಈ ಮೈಸೂರಿನ ಗಂಜಾಂ ಪುರಿ. ಪುರಿಯ ಮಹತ್ವ ಅಲ್ಪವಾದರೂ ಬರಿಯ ಪುರಿಗಾಗಿಯೇ ಎಲ್ಲರೂ ತಪ್ಪದೆ ಪುರಿ ಕೊಳ್ಳುತ್ತಿರಲಿಲ್ಲ;

ಹಾಗೆಂದು ನನ್ನ ತಿಳಿವಳಿಕೆ. ಪುರಿ ಕೊಳ್ಳುತ್ತಿದ್ದುದು ಪುರಿಗಾಗಿ, ಹಾಗೂ ಅದನ್ನು ಮಾರುತ್ತಿದ್ದ ಒಂದು ವ್ಯಕ್ತಿಗಾಗಿ. ಆ ವ್ಯಕ್ತಿಯೇ ಕೆಂಪಮ್ಮ.

ಕೆಂಪಮ್ಮ-ಕೆಂಪಿ ಎಂದು ಜನ ಕೂಗುತ್ತಿದ್ದರು—ಹೆಸರಿನಲ್ಲಿ ಮಾತ್ರ ಕೆಂಪಮ್ಮನಾಗಿರಲಿಲ್ಲ. ನಿಜವಾಗಿಯೂ ಕೆಂಪಗಿದ್ದಳು. ಆ ಕೆಂಪು ಫರಂಗಿ ಹೆಂಗಸರ ಪರಕೀಯವಾದ ತೊನ್ನುಗೆಂಪಲ್ಲ; ದೇಶೀಯವಾದ, ಮೋಹಕವಾದ, ಒಂದು ಬಗೆಯ ಕಪುಗೆಂಪು; ಪೂರ್ಣ ಆರೋಗ್ಯವನ್ನು ಸೂಸುವ, ಕಂಗೊಳಿಸುವ ಕೆಂಪು. ಈ ಕೆಂಪನ್ನು ಕಲ್ಪನೆಗೆ ತಂದುಕೊಳ್ಳಬೇಕಾದರೆ ಕಂಧಾರೆ ಹೆಂಗಸರನ್ನು ನೆನಪಿಗೆ ತಂದುಕೊಳ್ಳಬೇಕು; ಬಿಸಿಲಿನಲ್ಲಿ ಸುತ್ತಾಡಿದ ಮೇಲೆ ಸ್ವಲ್ಪ ಬಿಳುಪು ಮುಖ ಕೆಂಪಾಗುವುದನ್ನು ನೆನಪಿಗೆ ತಂದುಕೊಳ್ಳಬೇಕು; ಹಳೆಯ ಕಾವ್ಯೋಪಮೆಯನ್ನು ತೆಗೆದುಕೊಂಡು ಹೇಳಬಹುದಾದರೆ, ಕೆಂದಾವರೆಯನ್ನು ನೆನೆಯಬೇಕು.

ಕೆಂದಾವರೆ ಎನ್ನುತ್ತಲೇ ಚಟಕ್ಕನೆ ಅವಳ ಮುಖ ಜ್ಞಾಪಕಕ್ಕೆ ಬರುತ್ತದೆ. ಎಲ್ಲರಂತೆ ನಾನೂ ಅವಳ ಮುಖವನ್ನು ಕುತೂಹಲದಿಂದ ನೋಡಿದ್ದೇನೆ. ಅವಳ ಮುಖ ನಿಜವಾಗಿ ಕೆಂದಾವರೆ: ತಾವರೆಯ ಕೆಂಪು. ಅದರ ಗುಂಡು, ಅದರ ಅರಳು, ನೀರಿನಲ್ಲಿ ನಿಂತು ಸುಲಭವಾಗಿ ಸಿಕ್ಕದ ಆದರ ಧೀರ ಸೌಂದರ್ಯ; ತಾವರೆಯೆಸಳುಗಳ ನಡುವೆ ಸಿಕ್ಕಿಕೊಂಡ ಎರಡು ಕರ್ದುಂಬಿಗಳಂತೆ ಅವಳ ಚಂಚಲವಾದ ಕಣ್ಣೆರಡು. ಸಂಜೆಗೆಂಪಿನಲ್ಲಂತೂ ಅವಳ ಮುಖದ ಕೆಂಪು ಇಮ್ಮಡಿಯಾಗಿ ಮುಖ ಅದೊಂದು ಬಗೆಯ ಮೋಹಕತೆಯಿಂದ ಮೆರೆಯುತ್ತಿತ್ತು. ಈ ಕೆಂಪು ಮುಖದ ಕೆಂಪಮ್ಮ ಸೊಂಪಮ್ಮನೂ ಆಗಿದ್ದಳು. ದುಂಡಾದ ಮುಖದ ಜೊತೆಗೆ ದುಂಡಾದ ಮೈ ಕೈ; ಕೈಗೆ ಹಾಕಿದ್ದ ದೊಡ್ಡ ಬೆಳ್ಳಿಯ ಕಡಗಗಳು, ಬೆಳ್ಳಿಯ ತೋಳಬಂದಿಗಳು, ಬೆಳ್ಳಿಯ ಕಾಲ್ಗಡಗ ರುಳಿಗಳು, ಬೆಳ್ಳಿಯ ಕಾಲಂದುಗೆ,—ಇವು ಅವಳ ಮೈಮಾಟದ ದುಂಡನ್ನು ಹೆಚ್ಚಿಸಿದ್ದುವು. ಈ ಕೆಂಪಿಯ ಕೈಯಲ್ಲಿ ಕೆಂಪು ಬಳೆಗಳೆ; ಕೊರಳಿನಲ್ಲಿ ಹವಳದ ಸರವೆ! ಆದರೆ ಅವಳು ಉಡುತ್ತಿದ್ದ ಸೀರೆ ಮಾತ್ರ ಸಾಧಾರಣವಾಗಿ ಕಪ್ಪು—ಅವಳ ಕೆಂಪನ್ನು ಎತ್ತಿ ಮೆರೆಸುವ ಕಪ್ಪು. ತಲೆಯ ಮೇಲಿನ ಮುಸುಕು ಒಮ್ಮೊಮ್ಮೆ ಹೆಗಲಮೇಲೆ ಜಾರಿ ಬಿದ್ದಾಗ

ಸೀರೆಯ ಕಪ್ಪಿನ ಬದಲು ತಲೆಕೂದಲಿನ ಅಚ್ಚಕಪ್ಪೆ ಮುಖದ ಕೆಂಪನ್ನು ಎತ್ತಿ ತೋರಿಸುತ್ತಿತ್ತು.

ಕೆಂಪಮ್ಮ ತಲೆಯ ಮೇಲೆ ಪುರಿಯ ಗೂಡೆ ಹೊತ್ತು, ಎರಡು ಕೈಗಳನ್ನೂ ಬೀಸುತ್ತ, ಅಂದೊಂದು ಬಗೆಯ ವೈಯಾರದಿಂದ ಬಳುಕುತ್ತ, ಸೀರೆಯ ನೆರಿಯನ್ನು ತುಳುಕುತ್ತ, ಪಂಚಮ ಸ್ವರದಲ್ಲಿ "ಕಡಲೇ ಪುರೀ ಬೇಕ್ ಕಡಲೇ ಪುರೀ" ಎಂದು ಯಾವಾಗಲೋ ಒಮ್ಮೆ ಕೂಗಿದರೆ ಸಾಕು, "ಇಲ್ಲಿ ಬಾ ಇಲ್ಲಿ ಬಾ" ಎಂದು ಕರೆದು ಗುಂಪು ಗುಂಪಾಗಿ ಕುಳಿತಿದ್ದ ಜನ ಸೇರುಗಟ್ಟಲೆ ಪುರಿ ಹಾಕಿಸಿಕೊಳ್ಳುತ್ತಿದ್ದರು. ಪುರಿ ಹಾಕಿಸಿಕೊಳ್ಳುವಾಗ ಕೆಲವರ ಕೈ ಚೌಕವನ್ನೊ ಟೋಪಿಯನ್ನೊ ಹಿಡಿದಿರುತ್ತಿದ್ದುವು; ಕಣ್ಣು ಮಾತ್ರ ಕೆಂಪಮ್ಮನ ಮುಖವನ್ನೇ ದಿಟ್ಟಿಸುತ್ತಿದ್ದುವು. ಕೆಂಪಮ್ಮನಿಗೆ ಇದರಿಂದ ಲಾಭವೇ ಆಗುತ್ತಿತ್ತು; ಅಳತೆಯಲ್ಲಿ ಸ್ವಲ್ಪ ಹಿಡಿಯುತ್ತಿದ್ದಳು! ಜನಕ್ಕೆ ಪುರಿಯ ಅಳತೆಯಲ್ಲಿ ಸ್ವಲ್ಪ ಕಡಮೆಯಾದರೇನು? ಅವಳ ಮುಖ ದರ್ಶನದ ಲಾಭವಾಗುತ್ತಿತ್ತು. ಕೆಲವು 'ರಸಿಕ' ಜನ ಪುರಿ ಕೊಂಡುಕೊಂಡ ಮೇಲೆ ದುಡ್ಡು ಕೊಡುವಾಗ ಅವಳ ಕರ ಸ್ಪರ್ಶನವಾಡಿ ಕೊಡುತ್ತಿದ್ದರು. ಆರು ಕಾಸಿನ ವ್ಯಾಪಾರವಾಡಿ ಈ ರೀತಿಯಲ್ಲಿ ಒಂದಾಣೆ ಅವಳ ಕೈಗಿಟ್ಟಾಗ ಒಮ್ಮೊಮ್ಮೆ ಅವಳು ಹುಸಿ ನಂಬಿಕೆ ನಟಿಸುತ್ತ, ಹಾಗೆಯೇ ಬೇಗನೆ ತಲೆಯ ಮೇಲೆ ಮುಸುಕೆಳೆದುಕೊಂಡು ಥಟ್ಟನೆ ಹೊರಟುಹೋಗುತ್ತಿದ್ದಳು. ಮೋಸ ಮಾಡುವ ಉದ್ದೇಶದಿಂದ ಅವಳು ಹಾಗೆ ಮಾಡುತ್ತಿದ್ದಳೆಂದು ನಾನು ಹೇಳ ಲಾರೆ. ನನ್ನ ಮನಸ್ಸಿನಲ್ಲಿ, ಕೆಂಪಮ್ಮನೆಂದರೆ ಮುಗ್ಧಮೂರ್ತಿ; ನನ್ನ ಗೆಳೆಯನ ಅಭಿಪ್ರಾಯದಲ್ಲಿ, ಅವಳು ಮೋಹದ ಬಲೆ ಬೀಸಿ ಬಗೆ ಬಗೆಯಲ್ಲಿ ಮೋಸಮಾಡುತ್ತಿದ್ದ ಮೋಸಗಾರ್ತಿ. ಈ ವಿಷಯದಲ್ಲಿ ನಾನು ಹೆಚ್ಚು ಹೇಳಲಾರೆ. ಅವಳ ವಿಷಯವಾಗಿ ನಾನು ಹೇಳುವ ಸಂಗತಿಗಳು ಕೆಲವೆಲ್ಲ ನನ್ನ ಗೆಳೆಯನೇ ನೋಡಿ ನನಗೆ ಹೇಳಿದವು. ಹೇಗೋ ಎಂತೋ! ನನ್ನ ನಂಬಿಕೆ ಮಾತ್ರ ನನ್ನಲ್ಲಿ ಖಚಿತಗೊಂಡಿತ್ತು. ಇದು ಹಾಗಿರಲಿ. ಕೆಂಪಮ್ಮ ಹಾಗೆ ಹೋದಾಗ, ಕಡಲೆಪುರಿ ಕೊಂಡ ರಸಿಕ ಮಹಾಶಯರು ಬಾಕಿ ಚಿಲ್ಲರೆ ಕೇಳುವುದನ್ನು ಮರೆತು, ಪುರಿಗೆ ಕೈಯಿಕ್ಕುವುದನ್ನೂ ಮರೆತು, ಅವಳು ಹೋದ ದಾರಿಯಲ್ಲೇ ನೋಡುತ್ತ ಮೈಯನ್ನೂ ಮರೆಯುತ್ತಿದ್ದರು. ದಿಟ್ಟ

ಮಂದಿ ಒಬ್ಬಿಬ್ಬರು ಅವಳ ಕೈಹಿಡಿದು ಎಳೆದು ಕೂರಿಸಿಕೊಂಡು, ಬಹಳ ನಿಧಾನವಾಗಿ ವ್ಯಾಪಾರ ಮಾಡುತ್ತ, ಬಿಡಲಾರದ ಮನಸ್ಸಿನಿಂದ ಅವಳನ್ನು ಹೋಗಗೊಡುತ್ತಿದ್ದುದನ್ನು ನನ್ನ ಗೆಳೆಯನೊಡನೆ ನೋಡಿದ್ದೇನೆ. ಈ ಬಟ್ಟ ಜನಕ್ಕೆ ಬುದ್ಧಿ ಕಲಿಸುವವರು ಯಾರೂ ಅಲ್ಲಿ ಇರಲಿಲ್ಲ. ಕೆಲವರನ್ನು ಉಳಿದು ಹಲವು ಮಂದಿಗೆ ಕೆಂಪಿಯೊಡನೆ ವಿನೋದ ಸರಸ ಮಾಡುವುದೂ, ಮಾಡಿದ್ದನ್ನು ನೋಡುವುದೂ ಬೇಕಾಗಿದ್ದುದರಿಂದ ನಮ್ಮಂಥ ಒಬ್ಬಿಬ್ಬರು ಬುದ್ಧಿ ಕಲಿಸುವ ಸಾಹಸಕ್ಕೆ ಹೋಗಲು ಹೆದರುತ್ತಿದ್ದರು. ಅಲ್ಲದೆ, ಈ ಬಗೆಯ ವಿನೋದ ಸರಸಗಳಿಗೆ ಎಡೆಗೊಡುತ್ತಿದ್ದ ಕಾರಣ ಹೆಚ್ಚಿನ ವ್ಯಾಪಾರವಾಗುತ್ತಿದ್ದುದರಿಂದ, ಕೆಂಪಮ್ಮನೂ ಇದಕ್ಕೆಲ್ಲ ತಯಾರಾಗಿಯೇ ಇದ್ದಾಳೆ, ಇದೆಲ್ಲ ಅವಳಿಗೆ ಬೇಕು, ಎತ್ತಲಾಗಾದರೂ ಹಾಳಾಗಿ ಹೋಗಲಿ ನಮಗೇನು—ಎಂಬ ನನ್ನ ಗೆಳೆಯನ ತಟಸ್ಥ ಭಾವನೆಗೆ ನಾನೂ ಸಿಲುಕಿಹೋಗಿದ್ದೆ. ಆದ್ದರಿಂದ ಈ ವಿನೋದ ದೃಶ್ಯಗಳನ್ನು ನೋಡಿಕೊಂಡು ಸುಮ್ಮನಿರುತ್ತಿದ್ದೆವು.

ಟೌನ್‌ಹಾಲ್ ಮೈದಾನದಲ್ಲಿ ನಾವು ಪ್ರತಿದಿನವೂ ಒಂದೇ ಜಾಗದಲ್ಲಿ ಕುಳಿತುಕೊಳ್ಳುತ್ತಿದ್ದೆವು. ನನ್ನ ಗೆಳೆಯ ಒಂದು ದಿನವೂ ತಪ್ಪದೆ ಅವಳಲ್ಲಿ ಪುರಿ ವ್ಯಾಪಾರ ಮಾಡುತ್ತಿದ್ದ. ಒಂದೊಂದು ದಿನ ಅವನು ದುಡ್ಡು ಕೊಡುತ್ತಿದ್ದ; ಒಂದೊಂದು ದಿನ ನಾನು ದುಡ್ಡು ಕೊಡುತ್ತಿದ್ದೆ. ಅಂತೂ ಪ್ರತಿನಿತ್ಯವೂ ನಾವು ಪುರಿ ಕೊಳ್ಳುವುದು ಕೆಂಪಮ್ಮನಿಗೆ ಗೊತ್ತಿತ್ತು. ಕೆಲವರು ಕೂಗಿ ಕರೆದಾಗ ಕೆಂಪಮ್ಮ ಬಳಿಗೆ ಹೋಗುತ್ತಿದ್ದಳು; ಇವರು ಒಂದು ಬಗೆಯ ಜನ. ಕೆಲವರು ಎಷ್ಟು ಸಲ ಕೂಗಿದರೂ ಕೆಂಪಮ್ಮ ಅವರ ಬಳಿಗೆ ಬೇಗನೆ ಹೋಗುತ್ತಿರಲಿಲ್ಲ; ಅವರನ್ನು ಕಂಡರೆ ಅವಳಿಗೆ ಅಸಡ್ಡೆ; ಅಂಥವರು ಅವಳನ್ನು ಕೀಟಲೆ ಮಾಡುತ್ತಿದ್ದ ದುಷ್ಟ ಜನ. ಇನ್ನು ಕೆಲವರ ಬಳಿಗೆ ಕರಸಿಕೊಳ್ಳದೆಯೇ ಬಂದು 'ಪುರಿ ಬೇಕೆ ಬುದ್ಧಿ' ಎಂದು ಕೇಳಿಕೊಂಡು ಹೋಗುತ್ತಿದ್ದಳು; ಇವರು ಅವಳನ್ನು ವಿಶ್ವಾಸದಿಂದ ಮರ್ಯಾದೆಯಿಂದ ಕಂಡುಕೊಳ್ಳುತ್ತಿದ್ದ ಜನ. ಇದನ್ನೆಲ್ಲ ಪರಿಶೀಲಿಸಿಯೇ ನಾನು ಕೆಂಪಮ್ಮ ಮುಗ್ಧೆ, ಸರಳ ಮನಸ್ಸಿನ ತರುಣಿ, ಯಾವ ದುರ್ಭಾವನೆಯಿಂದಲೂ ಬಿಂಕ ಬಿನ್ನಾಣಗಳನ್ನು ನಟಿಸುತ್ತಿಲ್ಲ, ಇದೆಲ್ಲ ಅವಳ ಸಹಜ ಸುಂದರ ವರ್ತನೆ ಮಾತ್ರ ಎಂಬ ಸಿದ್ಧಾಂತಕ್ಕೆ ಬಂದಿದ್ದೆ. ಆದರೆ, ಮೊದಲೇ

ಹೇಳಿದಂತೆ, ನನ್ನ ಗೆಳೆಯನ ತೀರ್ಮಾನವೇ ಬೇರೆಯಾಗಿತ್ತು. ಅವನೂ ಸಹ ಒಮ್ಮೊಮ್ಮೆ ಅವಳೊಡನೆ ಸ್ವಲ್ಪಮಟ್ಟಿಗೆ ಸರಸ ವಿನೋದ ಮಾಡದೆ ಇರುತ್ತಿರಲಿಲ್ಲ. ಅವನ ವಿನೋದ ಸಭ್ಯತೆಯ ಎಲ್ಲೆ ಮೀರುವುದೆಂಬ ಸೂಚನೆ ಕಂಡುಬಂದೊಡನೆಯೆ ನಾನು ಅವನಿಗೆ ಅಂಕುಶವಿಡುತ್ತಿದ್ದೆ. ಅವನು ಬಾಯಿ ಮುಚ್ಚುತ್ತಿದ್ದ. ಆ ಕೂಡಲೆ ನಾನು ಎರಡು ವಿಶ್ವಾಸದ ಮಾತಾಡಿ ಕೆಂಪಮ್ಮನನ್ನು ಕಳುಹಿಬಿಡುತ್ತಿದ್ದೆ. ಅಂತೂ ಅವಳು ನಾವಿದ್ದೆಡೆಗೆ ತಾನೇ ಬಂದು 'ಪುರಿ ಬೇಕೆ' ಎಂದು ವಿಚಾರಿಸಿಕೊಂಡು ಹೋಗುತ್ತಿದ್ದಳು. ಎಂದೂ ಅವಳು ನಮಗೆ ಯಾವ ರೀತಿಯಲ್ಲೂ ಮೋಸಮಾಡಿರಲಿಲ್ಲ. ಅಚ್ಚೇರು ಪುರಿಗೆ ಅರೆಪಾವು ಕೊಸರು ಹಾಕುತ್ತಿದ್ದಳು. ಒಂದೆರಡು ಸಲ ಇಬ್ಬರ ಜೇಬಿನಲ್ಲೂ ಕಾಸು ಇಲ್ಲದೆ ಇದ್ದಾಗ ಹಾಗೆಯೇ ಪುರಿ ಕೊಟ್ಟು ಬಿಟ್ಟಿದ್ದಾಳೆ. ಮಾರನೆಯ ದಿನ ಹಿಂದಿನ ದಿನದ ಬಾಕಿ ಕೊಡಲು ಹೋದಾಗ ಬೇಡವೆಂದಿದ್ದಾಳೆ. ಬಲವಂತಮಾಡಿ ಕೊಟ್ಟುಬಿಡಲು ಆ ದಿನ ನಾವು ಕೊಟ್ಟ ದುಡ್ಡಿನ ಎರಡರಷ್ಟು ಬೆಲೆಯ ಪುರಿ ಹಾಕಿ, ಸಿಂತಿದ್ದರಲ್ಲವೆ ಮಾತು ಎಂದು ಬುಡಬುಡನೆ ಹೊರಟುಹೋಗಿದ್ದಾಳೆ. ಹೀಗಿದ್ದುದರಿಂದ ಅವಳ ವಿಷಯದಲ್ಲಿ ಎಳ್ಳಷ್ಟು ಸಂಶಯ ಇಟ್ಟುಕೊಳ್ಳಲು ನಾನು ಸಿದ್ಧನಾಗಿರಲಿಲ್ಲ. ಅವಳ ತಂದೆ ತಾಯಿ ಯಾರು, ಅವಳಿಗೆ ಮದುವೆಯಾಗಿದೆಯೆ ಮುಂತಾಗಿ ನನ್ನ ಗೆಳೆಯನೆದುರಿಗೇನೇ ಅವಳನ್ನು ಕೇಳಿ ಅವನ ದುರಭಿಪ್ರಾಯವನ್ನು ತೊಲಗಿಸಬೇಕೆಂದು ಮನಸ್ಸು ಮಾಡಿದ್ದೆ. ಈ ನನ್ನ ಮನೋನಿಶ್ಚಯವನ್ನು ಅವನಿಗೂ ಸಹ ತಿಳಿಸಿದ್ದೆ. ಪ್ರತಿಯಾಗಿ ಅವನು ತನ್ನ ಅಭಿಪ್ರಾಯವನ್ನೇ ಖಚಿತ ಮಾಡುವಂಥ ನಿದರ್ಶನವನ್ನು ತೋರಿಸಿಕೊಡುವುದಾಗಿ ಪಂಥ ತೊಟ್ಟಿದ್ದ; ಐದು ರೂಪಾಯಿ ಪಣ ಒಡ್ಡಿದ್ದ.

ಒಂದು ಸಂಜೆ ಎಂದಿನಂತೆ ನಾನೂ ನನ್ನ ಗೆಳೆಯನೂ ಯಥಾಸ್ಥಾನದಲ್ಲಿ ಕುಳಿತಿದ್ದೆವು. ಎಂದಿನ ಹೊತ್ತಿಗೇ ಕೆಂಪಮ್ಮ ಬಂದು ಪುರಿ ಮಾರಾಟ ಮಾಡುತ್ತಿದ್ದಳು. ಎಷ್ಟು ಹೊತ್ತಾದರೂ ಅವಳು ನಮ್ಮ ಬಳಿಗೆ ಬರಲೇ ಇಲ್ಲ. ಯಾವನೋ ಒಬ್ಬ ಮನುಷ್ಯ ಅವಳ ಹಿಂದೆಯೇ ಅಲ್ಲಿ ಇಲ್ಲಿ ಸುಳಿ ದಾಡುತ್ತಿದ್ದ. ಇದ್ದಕ್ಕಿದ್ದ ಹಾಗೆಯೇ ಕೆಂಪಮ್ಮ ಗೂಡೆಯನ್ನು ಸೊಂಟದ

ಮೇಲೆ ಮೊಳಕೈಯಿಂದ ಒತ್ತಿ ಹಿಡಿದುಕೊಂಡು ಹೊರಟುಹೋದಳು. ಆ ಮನುಷ್ಯನೂ ಅವಳನ್ನು ಹಿಂಬಾಲಿಸಿಯೇ ಹೊರಟ.

ನನ್ನ ಗೆಳೆಯ ನನ್ನ ತೊಡೆ ತಿವಿದ; ಅವನ ಮುಖದಲ್ಲಿ ಗೆಲವಿನ ನಗೆಯಾಡುತ್ತಿತ್ತು. "ಏನೂ ?" ಎಂದೆ ನಾನು.

" ಅಲ್ಲಿ ನೋಡಿದೆಯೋ ಕೆಂಪಿಯ ಬೇಟೆಗಾರ ಕೆಂಪಿಯನ್ನು ಹಿಂಬಾಲಿಸುತ್ತಿರುವುದನ್ನ ! ಸೋಲು ಒಪ್ಪಿಕೊ, ಐದು ರೂಪಾಯಿ ತೆಗೆಯಮ್ಮ" ಎಂದ ಗೆಳೆಯ.

" ನೀನು ಇಲ್ಲದ್ದು ಸಲ್ಲದ್ದೆಲ್ಲ ಊಹಿಸಿದರೆ ನಾನು ನಂಬಲಾರೆ" ಎಂದೆ.

"ಹಾಗಾದರೆ ಪರೀಕ್ಷಿಸಿ ನೋಡಿಬಿಡೋಣ ಆಗ ಗೊತ್ತಾಗುತ್ತೆ" ಎಂದ.

ಮನೆಗೆ ಹೊರಡುವ ವೇಳೆಯಾಗಿತ್ತು. "ಹಾಗೆಯೇ ಆಗಲಿ" ಎಂದು ಎದ್ದೆ. ಇಬ್ಬರೂ ಕೆಂಪಮ್ಮನನ್ನು ಹಿಂಬಾಲಿಸಿ ಹೊರಟೆವು.

ಕೆಂಪಮ್ಮನೂ ಅವಳೊಡನೆ ಹೋಗುತ್ತಿದ್ದ ಮನುಷ್ಯನೂ ಸಂತೇಪೇಟೆಗೆ ಹೋದರು; ಅಲ್ಲಿ ಒಂದು ಪುರಿಯ ಅಂಗಡಿ. ಅಂಗಡಿಯ ಮೇಲೆ ಹುಡುಗ ಕುಳಿತಿದ್ದ. ಕೆಂಪಮ್ಮನೂ ಜೊತೆಯ ಮನುಷ್ಯನೂ ಅಂಗಡಿಯ ಒಳಹೊಕ್ಕರು.

ನಾನು ನನ್ನ ಗೆಳೆಯನನ್ನು ಕುರಿತು ಎಂದೆ: " ನೋಡು, ಕೆಂಪಮ್ಮನ ಜೊತೆಯಲ್ಲಿದ್ದಾತ ಅವಳ ಅಪ್ಪ. ಅಂಗಡಿಯ ಮೇಲೆ ಕುಳಿತಿರುವ ಹುಡುಗ ಅವಳ ತಮ್ಮ. ನಿನ್ನದೇ ಸೋಲು."

"ಅದು ಹೇಗೆ ಒಪ್ಪಲಿ ? ಆವನು ಅಂಗಡಿಯ ಮಾಲೀಕ. ಹುಡುಗ ಜೀತದ ಹುಡುಗ ಕೆಂಪಮ್ಮ ಆತನ ಬಳಿ ಪುರಿ ಕೊಂಡು ಮಾರುವವಳು. ಪುರಿ ಮಾರಿಕೊಟ್ಟು ಸಂಪಾದಿಸುವುದಲ್ಲದೆ ಬೇರೆ ರೀತಿಯಲ್ಲೂ........"

"ಸಾಕು ಸುಮ್ಮನಿರಪ್ಪ. ಏಕೆ ನಿನ್ನ ಬುದ್ಧಿ ಯಾವಾಗಲೂ ಕೆಟ್ಟದ್ದನ್ನೆ ಯೋಚಿಸುತ್ತೆ ?"

"ಇಷ್ಟೆಲ್ಲ ಯಾಕೆ. ಅಂಗಡಿಗೆ ಹೋಗಿ ವಿಚಾರಿಸಿಬಿಡೋಣ" ಎಂದ.

"ಸರಿ ಸರಿ, ವಿಚಾರಿಸುವುದೂ ಬೇಡ, ಗಿಚಾರಿಸುವುದೂ ಬೇಡ. ಸುಮ್ಮನೆ ನಡಿ, ಹೊತ್ತಾಯಿತು" ಎಂದೆ.

"ಎಲ್ಲಾ ಗೊತ್ತಿದೆ. ಇನ್ನು ಐದು ರೂಪಾಯಿ ಕಕ್ಕಬೇಕಾಗುತ್ತೆ ಅಂತ."

"ಹಾಗೇ ಆಗಲಿ" ಎಂದೆ. ಇಬ್ಬರೂ ಸುಮ್ಮನೆ ಹೊರಟೆವು.

ಮಾರನೆಯ ದಿನ ಸಂಜೆ ಕೆಂಪಮ್ಮ ತಾನಾಗಿಯೇ ನಮ್ಮ ಬಳಿಗೆ ಬಂದು 'ಪುರಿ ಬೇಕೆ' ಎಂದು ವಿಚಾರಿಸಿದಳು. ನಾನು ಚೌಕ ಹಾಸಿದೆ. ಅವಳು ಅಚ್ಚೇರು ಪುರಿ ಹಾಕಿದಳು.

"ಕೊಸರು ಮರತೆಯಲ್ಲ" ಎಂದ ನನ್ನ ಗೆಳೆಯ.

ಅರೆಪಾವಿನಷ್ಟು ಪುರಿ ಹಾಕಿದಳು ಕೆಂಪಮ್ಮ.

"ದುಡ್ಡು ನಾಳೆ ಕೊಟ್ಟರೆ ಆಗುತ್ತದೆಯೋ ?" ಎಂದು ಕೇಳಿದ ನನ್ನ ಗೆಳೆಯ.

"ಹಂಗೇ ಮಾಡಿ ಬುದ್ದಿ. ನೀವು ಎಲ್ಲಿ ಓಡಿಹೋದೀರ. ಇಷ್ಟರ ಮ್ಯಾಗೆ ಕೊಟ್ಟರೂ ಆತು, ಬಿಟ್ಟರೂ ಆತು. ಇಷ್ಟು ದಿನ ವ್ಯಾಪಾರಮಾಡಿ ನಿಮಗೆ ಅಚ್ಚೇರು ಪುರಿ ಕೊಡಲ್ಲಾಗ್ದ ? ನಿಮ್ಮ ಇಸ್ವಾಸ ಇದ್ದರೆ ಸಾಕು ಬುಡಿ ಬುದ್ದಿ."

"ನನ್ನ ಗೆಳೆಯ ನನ್ನ ತೊಡೆ ಚಿವಿದು, ಮತ್ತೆ ಕೆಂಪಿಯೊಡನೆ ಮಾತಾಡತೊಡಗಿದ.

"ನಿನ್ನನ್ನ ಒಂದು ಮಾತು ಕೇಳಬೇಕೂ ಅಂತ ಇದ್ದೀನಿ. ಏನೂ ತಿಳಿದುಕೊಳ್ಳದೆ ಹೋದರೆ........"

"ಏನ್ ಬುದ್ದಿ ಹಿಂಗೇಳ್ತೀರ. ನೀವು ಏನಾರ ಕೇಳಿ, ಏನಾರ ಹೇಳಿ. ಎಲ್ಲ ನಿಮ್ಮಂತೋರ ಬುದ್ದಿ."

"ನೀನು ಸುಖವಾಗಿದ್ದೀಯ ಕೆಂಪಮ್ಮ."

"ಸುಕವಾಗಿಲ್ಲದೆ ಏನು ಬುದ್ದಿ."

"ಪುರಿ ಮಾರುವುದು ನಿನಗೆ ಬೇಜಾರಾಗುವುದಿಲ್ಲವೆ ?"

"ಬೇಜಾರೇನು ಬುದ್ದಿ ಬೇಜಾರು. ಸಂಜೆ ಐದು ಗಂಟೆಗೆ ಬಂದರೆ ನೆಗ್ತಾ ನೆಗ್ತಾ ಪುರಿಮಾರ್ತಾ ಹಂಗೇ ಏಳು ಹೊಡೀತ್ತೈತೆ. ಪುರಿ ಮಾರೋದೂ ಒಂದು ಕೆಲಸವಾ. ನಿಮ್ಮಂತೋರ ಪಾದಸೇವೆ ಬುದ್ದಿ."

ನನ್ನ ಗೆಳೆಯ ಮತ್ತೊಂದು ಸಲ ನನ್ನ ಭುಜ ಚಿವಿದ.

"ನಿನ್ನ ಗಂಡ ಯಾರೆ ಕೆಂಪಮ್ಮ?"

ಕೆಂಪಮ್ಮ ಮಾತಾಡಲಿಲ್ಲ. ತಲೆಯ ಮೇಲೆ ಮುಸುಕು ಎಳೆದು ಕೊಂಡು ಹೊರಡುವ ಚಿಹ್ನೆ ತೋರಿಸಿದಳು. ತುಟಿಯಿಂದ ನಸುನಗೆ ನುಸುಳಿ ಬಂದಿತ್ತು; ಮುಖದಲ್ಲಿ ನಾಚಿಕೆಯ ನಟನೆಯಿತ್ತು.

"ನಾಚಿಕೆ ಯಾಕೆ ಕೆಂಪಮ್ಮ? ನಿನ್ನ ಗಂಡನ ಹೆಸರೇನೆ?"

ಕೆಂಪಮ್ಮ ಮೌನವಾಗಿದ್ದಳು. ನಗೆ ಮಾತ್ರ ಮಾಸದೆ ಹಾಗೆಯೇ ಉಳಿದಿತ್ತು. ನಾಚಿಕೆ ಸ್ವಲ್ಪ ಜಾರಿತ್ತು.

"ನಿನಗೆ ಮಕ್ಕಳಿಲ್ಲವೆ ಕೆಂಪಮ್ಮ?"

ಉತ್ತರವಿಲ್ಲ. ನಗೆ ಕೊಂಚ ವಂಕಾದ ಹಾಗೆ ಆಯಿತು.

"ನಿನ್ನ ಗಂಡನೊಡನೆ ಮಾತಾಡಬೇಕಾಗಿತ್ತು. ಅವನ ಹೆಸರು ಹೇಳಿದರೆ...."

ಕೆಂಪಮ್ಮ ಬಾಯಿ ಬಿಟ್ಟಳು; ಮತ್ತೆ ನಗೆ ಮೂಡಿತ್ತು.

"ನೀವು ಏನೇನೋ ಕೇಳ್ತೀರ ಬುದ್ಧಿ. ಹೆಂಗೆ ಬಾಯಿ ಬಿಡಲಿ ಹೇಳಿ. ನನ್ನ ಕೂಡ ನಮ್ಮಂಗಡಿಗಾರೂ ಬನ್ನಿ. ಎಲ್ಲಾ ಗೊತ್ತಾಗ್ತೈತೆ" ಎಂದು ಹೇಳಿ ಕೆಂಪಮ್ಮ ತಲೆಯ ಮೇಲೆ ಗೂಡೆ ಇಟ್ಟುಕೊಂಡಳು.

"ಎಂದಾದರೂ ಬರುತ್ತೇವೆ ಹೋಗು. ಬಂದಾಗ ಒಳ್ಳೆ ಸೊಗಸಾದ ಪುರಿ ಕೊಡಬೇಕು ನೋಡು" ಎಂದೆ ನಾನು.

"ನೀವು ಅಲ್ಲಿಗಂಟ ಪಾದ ಬೆಳಸಿ ಬುದ್ಧಿ. ನಿಮ್ಮಂತೋರ ಸೇವೇಗೇನೆ ಅಂಗಡಿ ಮಡಗಿರೋದು" ಎಂದು ಕೆಂಪಮ್ಮ ಕೊನೆಯ ಸಲ ನಗೆ ಬೀರಿ ಹೊರಟುಹೋದಳು.

ಅವಳು ಹೊರಟುಹೋದಮೇಲೆ ನನ್ನ ಗೆಳೆಯ ಹೀಗೆ ಹೇಳಿದ: "ನೋಡಿದೆಯಾ. ಕೆಂಪಮ್ಮನ ಬಣ್ಣ ಈಗಲಾದರೂ ಗೊತ್ತಾಯಿತೋ? ಎಲ್ಲ ಅವಳ ಮಾತಿನಿಂದಲೇ ಗೊತ್ತಾಗುತ್ತೆ. ಎಷ್ಟು ಬುದ್ಧಿವಂತಿಕೆಯಿಂದ ಮಾತಾಡುತ್ತಾಳೆ! ನಮ್ಮ ಸೇವೆಗೇ ಅಂತೆ ಅವಳು ಅಂಗಡಿ ಇಟ್ಟಿರೋದು. ಎಷ್ಟು ಕೇಳಿದರೂ ಗಂಡನ ವಿಚಾರ ಅವಳು ಬಾಯಿ ಬಿಟ್ಟಿರಬೇಕಲ್ಲ. ಅವರ ಜನದಲ್ಲಿ ನಾಚಿಕೆಯೇ ಇಲ್ಲ. ಗಂಡನನ್ನು ನೀನು ತಾನು ಎಂದು ಮಾತಾಡಿ ಸುತ್ತಾರೆ. ಗಂಡನ ವಿಚಾರ ಕೇಳಿದರೆ ಅವಳ ನಾಚಿಕೆಯ ನಟನೆ

ನೋಡಿಪೆಯ ಹೇಗಿತ್ತು? ಮದುವೆ ಮಾಡಿಕೊಂಡ ಗಂಡ ಇದ್ದರಲ್ಲವೆ ಗಂಡನ ವಿಚಾರ? ನೀನು ಯಾವಾಗಲೂ ಹೀಗೆ, ಮೇಲಿನ ಬಣ್ಣ ನೋಡಿ ಮೋಸಹೋಗೋದು; ಕಪಟದ ಸೋಗು ಹಾಕಿಕೊಳ್ಳುವವರನ್ನು ಸಾಚಾ ಎಂದು ನಂಬುವುದು ಹೋಗಲಿ. ಈಗಲಾದರೂ ಸೋಲು ಒಪ್ಪಿಕೊಳ್ಳುತ್ತೀಯೋ, ಇಲ್ಲ ಅವಳ ಮನೆಗೇ ಹೋಗಿ ಪರೀಕ್ಷೆ ಮಾಡಬೇಕೊ ?" ಎಂದು ಕುಹಕದ ಧ್ವನಿಯಲ್ಲಿ ನನ್ನನ್ನು ಕೆಣಕಿ ನುಡಿದ.

ನಾನು ಯಾವ ಮಾತನ್ನೂ ಆಡದೆ ಸುಮ್ಮನಿದ್ದೆ. ಮನಸ್ಸಿನಲ್ಲೇ "ಐದು ರೂಪಾಯಿ ಸೋತೆ" ಎಂದುಕೊಂಡೆ.

ಇದಾದ ಕೆಲವು ದಿನಗಳ ಮೇಲೆ ಇದ್ದಕ್ಕಿದ್ದ ಹಾಗೆಯೇ ಕೆಂಪಮ್ಮ ಬರುವುದು ನಿಂತುಹೋಯಿತು. ತಿಂಗಳಾಯಿತು ಎರಡು ತಿಂಗಳಾಯಿತು. ಮೂರಾಯಿತು. ಹೀಗೆಯೇ ಹಲವು ತಿಂಗಳುಗಳು ಉರುಳಿದುವು. ವರ್ಷವಾಯ್ತು. ಕೆಂಪಮ್ಮನ ಸುಳಿವಿಲ್ಲ. ಯಾವ ಮಹಾ ಪ್ರಸಿದ್ಧ ವ್ಯಕ್ತಿಯೆಂದ, 'ಕೆಂಪಮ್ಮ ಯಾಕೆ ಬರುತ್ತಿಲ್ಲ' ಎಂದು ಯಾರನ್ನು ಕೇಳುವುದು? ಆದರೆ ನನ್ನ ಮನಸ್ಸಿನಲ್ಲಿ ಮಾತ್ರ, ಹತ್ತಿರದ ಗೆಳೆಯನನ್ನು ಬಹುಕಾಲದವರೆಗೆ ಕಾಣದೆ ಹೋದರೆ ಅವನ ವಿಚಾರವಾಗಿಯೇ ಮನಸ್ಸು ಹೇಗೆ ತೊಳಲುತ್ತಿರುತ್ತದೆಯೋ ಹಾಗೆ ಕೆಂಪಮ್ಮನ ವಿಷಯದಲ್ಲೂ ಅನ್ನಿಸುತ್ತಿತ್ತು. ಒಮ್ಮೊಮ್ಮೆ 'ನನ್ನ ಗೆಳೆಯನ ಊಹೆಯೇ ಸರಿಯಾಗಿರಬಹುದು; ಅವಳು ಯಾರನ್ನೋ ಕಟ್ಟಿಕೊಂಡು ಓಡಿಹೋಗಿಬಿಟ್ಟಿದ್ದಾಳೆ; ಹಾಗಿಲ್ಲದೆ ಇದ್ದರೆ ಬಾರದೆ ಇರುತ್ತಿರಲಿಲ್ಲ'—ಎಂಬ ಭಾವನೆ ಸುಳಿಯುತ್ತಿತ್ತು. ಮರುಗಳಿಗೆಯೇ,—'ಛೆ, ಇರಲಾರದು; ಅವಳ ಮುಖಭಾವದಲ್ಲಿ, ಕಣ್ಣಿನ ನೋಟದಲ್ಲಿ, ಅಂಥ ಕೀಳುತನದ ಚಿಹ್ನೆಯಿರಲಿಲ್ಲ'—ಎಂದು ಆ ಭಾವನೆ ಬದಲಾಯಿಸುತ್ತಿತ್ತು. ಮತ್ತೆ ನನ್ನ ಗೆಳೆಯನ ನಿರ್ಧಾರದ ಕಡೆಗೇ ಮನಸ್ಸು ಹೊರಳುತ್ತಿತ್ತು: 'ಇದ್ದರೂ ಇರಬಹುದು. ಮೇಲೆ ಸುಂದರವಾಗಿ ಕಾಣುವುದು ಒಳ್ಳೆಯದಲ್ಲದೆ ಇರಬಹುದು; ಹಿತಕಾರಿಯಲ್ಲದೆ ಇರಬಹುದು. ಮೇಲೆ ತುಚ್ಛವಾಗಿ ಕಾಣುವುದು ಕೀಳಾಗಿರದೆ ಸತ್ವಪೂರ್ಣವಾಗಿ, ಶುದ್ಧವಾಗಿ ಇರಬಹುದು. ನಿಜಸ್ಥಿತಿ ಪ್ರಮಾಣಸಹಿತವಾಗಿ ಸ್ಪಷ್ಟವಾಗುವವರೆಗೂ ಹೇಗೆ ಹೀಗೆಯೇ ಸರಿ ಎಂದು ನಂಬುವುದು? ಹೌದು. ನಿಜಸ್ಥಿತಿ ಸ್ಪಷ್ಟವಾಗಬೇಕು; ಪ್ರಮಾಣ

ದೊರೆಯಬೇಕು; ಆಗಲೇ ನನ್ನ ಗೆಳೆಯನ ನಿರ್ಧಾರವನ್ನು ನಂಬುವುದು. ಅಲ್ಲಿಯವರೆಗೂ ಕೆಂಪಮ್ಮ ಮುಗ್ಧೆ, ಸರಳೆ, ಶೀಲವಂತೆ, ಗುಣವಂತೆ ಎಂದೇ ನಂಬುತ್ತೇನೆ. ಘೋರವಾದ, ಅಹಿತವಾದ, ನಿಜಸ್ಥಿತಿ ತಿಳಿದು ನನ್ನ ಮನಸ್ಸಿಗೆ ವ್ಯಥೆಯಾಗುವ ಮುನ್ನ ಕೆಲಕಾಲವಾದರೂ ಈ ಶುದ್ಧ ಸುಂದರ ಕಲ್ಪನೆಯನ್ನೇ ನನ್ನ ಮನಸ್ಸಿನಲ್ಲಿ ಇಟ್ಟುಕೊಂಡಿರುತ್ತೇನೆ'—ಎಂಬ ಈ ವಿಚಾರದಿಂದ ನನ್ನ ಮೊದಲಿನ ಸಂಕಲ್ಪವೇ ಮತ್ತೆ ಸ್ಥಿರವಾಗುತ್ತಿತ್ತು.

ಹೀಗೆಯೇ ಮತ್ತೆ ಒಂದೆರಡು ತಿಂಗಳುಗಳು ಕಳೆದುವು. ಆದರೂ ಕೆಂಪಮ್ಮನ ಸುಳಿವಿಲ್ಲ. ನನ್ನ ಗೆಳೆಯನೆಂದ: ಕೆಂಪಮ್ಮ ಒರುವುದು ನಿಂತ ಮೇಲೆ ಈ ಮೈದಾನದ ಗೆಲವೇ ಹೋಯಿತು ಕಣೋ. ಅವಳು ತರುತ್ತಿದ್ದ ಪುರಿಯ ಹದ ಎಂಥದೋ! ಅವಳೇನೋ 'ಗಂಜಾಂ ಪುರಿ' ಎಂದು ಕೂಗುತ್ತಿದ್ದಳು. ಆದರೆ ಅದು ಶುದ್ಧ ಮೋಸ. ಆವಳ ಅನೇಕ ಮೋಸ ಥಳುಕುಪಳುಕುಗಳಲ್ಲಿ ಅದೂ ಒಂದು. ಆದರೆ ಆವಳು ತರುತ್ತಿದ್ದ ಪುರಿ ಗಂಜಾಂಪುರಿಗೇನೂ ಕಡಮೆಯಿರುತ್ತಿರಲಿಲ್ಲ. ಆ ಪುರಿಯನ್ನು ಕಂಡು ಎಷ್ಟು ದಿನವಾಯ್ತೋ! ಎಷ್ಟೋ ಜನರ ಪುರಿ ಪರೀಕ್ಷೆ ಮಾಡಿಯಾಯ್ತು; ಆದರೆ ಅವಳ ಪುರಿಯ ಸಮ ಇಲ್ಲ. ಕೆಂಪಮ್ಮ ಹೇಗಾದರೂ ಇರಲಿ; ಅವಳ ಪುರಿ ತಪ್ಪಿದ್ದು ದೊಡ್ಡ ನಷ್ಟ!!

"ಹೌದು. ಆವಳು ಬಾರದಿರುವುದು ದೊಡ್ಡ ನಷ್ಟ. ಕೆಂಪಮ್ಮ ಸಂಜೆಯವೇಳೆ ಇಲ್ಲಿ ತಿರುಗುತ್ತಿದ್ದರೆ ಅದೆಷ್ಟು ಕೆಂಪಗೆ ಕಾಣುತ್ತಿದ್ದಳು. ಅವಳಿಂದ ಸಂಜೆಯೇ ಕೆಂಪಗಿರುವಂತೆ ನನಗೆ ಕಾಣುತ್ತಿತ್ತು."

"ಸಂಜೆಯೇ ಕೆಂಪೋ....ನಿನ್ನ ದೃಷ್ಟಿಯೇ ಕೆಂಪೋ....ಈ ಕಾವ್ಯಾಲಾಪ ನನಗೆ ಬರುವುದಿಲ್ಲ. ನನಗೆ ತಿಳಿಯುವುದು, ಅಂಥ ಪುರಿ ಇಲ್ಲದಿರುವುದು ಒಂದೇ."

ಮೇಲಿನ ಮಾತು ನಡೆದ ಮೂರು ನಾಲ್ಕು ದಿನದ ಮೇಲೆ, ನಮ್ಮ ಬಳಿಗೆ ಹಲವು ದಿನ ಬಂದು ಕೇಳಿ ಬೇಸರಗೊಂಡು ಹೋಗಿ, ನಮ್ಮ ಬಳಿಗೇ ಬರುವುದನ್ನು ನಿಲ್ಲಿಸಿದ್ದ ಒಬ್ಬ ಪುರಿ ಮಾರುವವನನ್ನು ಕೂಗಿದೆವು. ಅವನ ಪುರಿ ನಾವು ರುಚಿ ನೋಡಿರಲಿಲ್ಲ ಅವನ ತರಕಲು ಗಡ್ಡ ಮೀಸೆ ಬೆಳೆದ ಕರಿಯ ಮುಖ, ಕೊಳಕು ಬಟ್ಟೆ—ಇವನ್ನು ನೋಡಿ. ಅವನನ್ನು ಹತ್ತಿರಕ್ಕೆ

ಕರೆಯುವುದಕ್ಕೂ ಅಸಹ್ಯವಾಗಿತ್ತು ; ನನಗಿಂತ ಹೆಚ್ಚಾಗಿ ನನ್ನ ಗೆಳೆಯನಿಗೆ ಹೀಗೆ ಅನ್ನಿಸಿತ್ತು. ಮನುಷ್ಯ ಹೇಗಿದ್ದರೆ ಏನು, ಪುರಿ ಚೆನ್ನಾಗಿರಬಹುದು ಎಂದು ನಾನು ಹೇಳಿದ ಮೇಲೆ, ನನ್ನ ಗೆಳೆಯ ಅವನನ್ನು ಕರೆದು ಪುರಿ ಹಾಕಿಸಿಕೊಂಡ. ಪುರಿ ತಿಂದುನೋಡಿ ಕಾಸು ಕೊಡುತ್ತೇನೆಂದು ಹೇಳಿದ್ದ. ಆದ್ದರಿಂದ ಬಾಯಿಗೆ ಒಂದಿಷ್ಟು ಪುರಿ ಹಾಕಿದ. ಅವನ ಮುಖ ಅರಳಿತು. ಹೇಗಿದೆಯೋ ಎಂದೆ. ಬಾಯಿತುಂಬ ಪುರಿ ತುಂಬಿಕೊಂಡಿದ್ದರಿಂದ 'ನೀನು ಸ್ವಲ್ಪ ತಿನ್ನು' ಎನ್ನುವಂತೆ ಸನ್ನೆ ಮಾಡಿದ. ನಾನೂ ಸ್ವಲ್ಪ ತಿಂದೆ. ಅಷ್ಟು ಹೊತ್ತಿಗೆ ಅವನ ಬಾಯಿಗೆ ಬಿಡುವಾಗಿತ್ತು "ಚೆನ್ನಾಗಿದ ಅಲ್ಲವೇನೋ; ಕೆಂಪಮ್ಮನ ಪುರಿ ಎಲ್ಲಿ ಅನ್ನುವಹಾಗಿಲ್ಲ ಅಲ್ಲವೆ ?" ಎಂದ. ನಾನು "ಹೌದು" ಎಂದು ಸೂಚಿಸಿ ತಲೆತೂಗಿದೆ. ಆಗ ನನ್ನ ಬಾಯಿಗೆ ಬಿಡುವಿರಲಿಲ್ಲ.

ಪುರಿ ಮಾರುವವನು ಇದ್ದಕ್ಕಿದ್ದಂತೆಯೇ ಪುರಿಯ ಗೂಡೆಯನ್ನು ಕೆಳಕ್ಕೆ ಇಟ್ಟು, ನಮ್ಮ ಎದುರಿಗೆ ಕುಳಿತು, ತಲೆಗೆ ಸುತ್ತಿದ್ದ ಚೌಕ ಬಿಚ್ಚಿಕೊಂಡು ಮುಖ ಮುಚ್ಚಿಕೊಂಡು ಕುಳಿತ. 'ಏನೋ ?' ಎಂದೆವು. ಮಾತಿಲ್ಲ. ಎಷ್ಟು ಮಾತಾಡಿಸಿದರೂ ಮಾತಿಲ್ಲ. ಹಾಗೆಯೇ ನೋಡಿದರೆ ಅಳುತ್ತಿದ್ದಾನೆ ! ನಮಗೆ ಅತ್ಯಾಶ್ಚರ್ಯವಾಯಿತು.

"ಯಾಕೋ ಹೀಗೆ ಅಳುತ್ತಿ ? ಇಲ್ಲಿಗೆ ಪುರಿ ಮಾರುವುದಕ್ಕೆ ಬರುತ್ತಿದ್ದ ಕೆಂಪಮ್ಮ ನಿನಗೇನಾಗಬೇಕೊ ? ಅವಳಿಗೆ ಏನಾಗಿದೆಯೊ ?" ಎಂದು ಕೇಳಿದೆ.

ಆ ಮನುಷ್ಯ ತುಸ ಹೊತ್ತು ಮಾತಾಡಲಿಲ್ಲ. ದುಃಖಶಮನವಾದ ಮೇಲೆ ಹೇಳತೊಡಗಿದ:

"ಚಿನ್ನದಂಥ ಹುಡುಗಿ ಬುದ್ಧಿ, ಚಿನ್ನದಂಥ ಹುಡುಗಿ. ತೀರಿಹೋಗಿ ಮೂರು ತಿಂಗಳಾಯ್ತು."

"ಕೆಂಪಮ್ಮ ನಿನ್ನ ಮಗಳೇನೋ ?"

"ಅಲ್ಲ ಬುದ್ಧಿ, ನನ್ನ ಹೆಸ್ತಿ."

"ನಿನ್ನ ಹೆಂಡತಿಯೇ !"

"ಹೌದು ಬುದ್ಧಿ. ನನ್ನ ಎರಡನೆ ಹೆಸ್ತಿ. ಒಳ್ಳೆ ಲಕ್ಷ್ಮಿ ಹಂಗಿದ್ದಳು. ತೀರಿಹೋಗಿಬಿಟ್ಟಳು."

ಈಗ ನಿಜಸ್ಥಿತಿ ಸ್ಪಷ್ಟವಾಯಿತು ನನಗೆ. ವಯಸ್ಸಾದ ಎರಡನೆಯ ಗಂಡ ; ಕುರೂಪಿ ; ಕುಡಿತದ ಕತ್ತೆ ಮಾತ್ರ ; ಕೆಂಪಮ್ಮ ಹುಡುಗಿ, ಸರಸಿ, ವಿನೋದಿ, ಹುಡುಗು ಮನಸ್ಸು. ಗಂಡನೊಡನೆ ಸರಸವಾಡಬೇಕು ಅವಳು? ಇಲ್ಲಿ ವ್ಯಾಪಾರಕ್ಕೆ ಬಂದಾಗ ಗಿರಾಕಿಗಳೊಡನೆಯೇ ಸರಸವಾಡಿ ತನ್ನ ಸ್ವಾಭಾವಿಕ ಪ್ರವೃತ್ತಿಯಂತೆ ವರ್ತಿಸಿ ಸಂತೋಷಪಡುತ್ತಿದ್ದಳು. ಇದೇ ಕಾರಣದಿಂದಲೇ ತನ್ನ ಗಂಡನ ಪರಿಚಯವನ್ನು ಸಹ ನನ್ನೊಡನೆ ಬಿಚ್ಚಿ ಹೇಳಲು ಅವಳು ಅಂದ ನಾಚಿಕೆಪಟ್ಟಿದ್ದು. ನನ್ನ ಸದ್ಭಾವನೆಗೇ ಜಯವಾಯಿತು ಕೊನೆಗೆ. ಸಂತೋಷವಾಯಿತು. ದುಃಖವೂ ಆಯಿತು:—ಕೆಂಪಮ್ಮ ಕಣ್ಮರೆಯಾದಳೆಂದು.

"ಹೇಗೆ ತೀರಿಹೋದಳೊ?" ಎಂದು ನನ್ನ ಗೆಳೆಯ ಕೇಳಿದ.

"ಮದುವೆ ಮಾಡಿಕೊಂಡು ಮೂರುವರ್ಷ ಆಗಿತ್ತು ಬುದ್ಧಿ. ಮಕ್ಕಳೇ ಇರ್ಲಿಲ್ಲ. ಏನೇನೋ ಹರಕೆ ಹೊತ್ತೆ. ಕೊನೆಗೆ ಬಸುರಾದ್ಲು. ಮೊದಲ ಹೆಡ್ತಿಗಂತೂ ಮಕ್ಕಳಿರ್ಲಿಲ್ಲ. ಇವಳ್ಗಾದ್ರೂ ಆಗ್ತೈತೆ ಅಂತ ಇದ್ದೆ. ಮಗಾನ ಹಡದ್ಲು. ಆದ್ರೇನು, ಮಗಾನ ಜೊತೇಲೇ ಕರಕೊಂಡು ಹೊಂಟು ಹೋದ್ಲು ಬುದ್ಧಿ" ಎಂದು ಕಣ್ಣೀರಿಟ್ಟ. ಸ್ವಲ್ಪ ಚೇತರಿಸಿಕೊಂಡಾದ ಮೇಲೆ ಮತ್ತೆ ಹೇಳಿದ: "ಅವಳು ಒಳ್ಳೆ ಲಕ್ಸ್ಮಿ ಹಂಗಿದ್ಲು ಬುದ್ಧಿ. ನಾನು ಏಟು ಪುರಿ ಹುರಿದು ಕೊಟ್ಟರೂ ಮಾರಿಕೊಂಡು ಬಂದುಬಿಡ್ತಿದ್ಲು. ಅವಳು ಹೋದಮೇಲೆ ಕೆಲ್ಸಾ ಮಾಡಾಕೇ ಮನಸ್ಸಾಗಾಕಿಲ್ಲ ಬುದ್ಧಿ. ಅವಳ ಗುಣ ಏನು! ಚಿನ್ನದಂಥ ಗುಣ! ಚಿನ್ನದಂಥ ಹುಡುಗಿ ಬುದ್ಧಿ ಅವಳು! ನನ್ನ ಕಂಡರೆ ಅದೇನು ಬಯ ಬಕ್ತಿ ಬುದ್ಧಿ ಅವಳದ್ದು! ಅದ್ಹ್ಯಂಗೆ ನನ್ನ ಮನಸ್ಸು ಒಪ್ಪೋಹಂಗೆ ನಡ್ಕೊಂಡಿದ್ಲು! ಇಂಥ ಹೆಡ್ತಿ ಹೋದಮ್ಯಾಗೆ ಬೇಜಾರಾಗ್ದೆ ಇನ್ನೇನ್ ಬುದ್ಧಿ. ಅವಳೋದಮ್ಯಾಗೆ ಹಂಗೇ ಕೆಲ್ಸಮಾಡ್ದೇನೆ ಇದ್ಬುಟ್ಟೆ ಬುದ್ಧಿ. ಆದ್ರೆ ಹೊಟ್ಟೆ ಕೇಳ್ಬೇಕಲ್ಲ. ಈಗ ನಾನೇ ಪುರಿ ಮಾರೋಕೆ ಹೊಂಟವ್ನಿ. ನನ್ನ ಪುರೀನ ಯಾರೂ ಕೇಳೋರೆ ಇಲ್ಲ. ಅವಳು ದಿನಕ್ಕೆ ಎರಡು ರೂಪಾಯಿ ಸಂಪಾದಿಸ್ತ ಇದ್ಲು. ನನಗೆ ದಿನಕ್ಕೆ ಎರಡು ಆಣೆ ಆಗೋಕಿಲ್ಲ ಬುದ್ಧಿ. ಮೊನ್ನೆ ಬಂದಿದ್ದ ಅಂಗಡಿ ಬಾಡಿಗೆ ಕೇಳೋಕೆ ಯಜಮಾನ, ರೇಗಾಡಿ ಹೋದ ಏನು ಮಾಡೋವ ಬುದ್ಧಿ, ಯಾಪಾರಾನೇ

ಇಲ್ಲ. ಅವಳ ಹಿಂದೇನೇ ಹೋದೋ ಯಾಪಾರ ನನ್ನ ಭಾಗ್ಯ ಎಲ್ಲ" ಎಂದು ಮತ್ತೆ ಕಣ್ಣೀರಿಟ್ಟ.

"ಎಷ್ಟು ಕೊಡಬೇಕೋ ಬಾಡಿಗೆ?" ಎಂದು ನನ್ನ ಗೆಳೆಯ ಕೇಳಿದ.

"ಎರಡು ತಿಂಗಳ ಬಾಕಿ ಬುದ್ಧಿ, ಐದು ರೂಪಾಯಿ."

"ತಗೊಳ್ಳೊ" ಎಂದು ನನ್ನ ಗೆಳೆಯ ಐದು ರೂಪಾಯಿ ತೆಗೆದು ಅವನ ಕೈಗೆ ಕೊಟ್ಟ.

"ಇದು ಏನು ಬುದ್ಧಿ ಇದು!" ಎಂದು ಆಶ್ಚರ್ಯದಿಂದ ಕೇಳಿದ ಕೆಂಪಮ್ಮನ ಗಂಡ.

ನನ್ನ ಗೆಳೆಯ ಮೌನದಿಂದ ಇದ್ದ.

"ಏನೂ ಇಲ್ಲ, ನಾವಿಬ್ಬರೂ ಸೇರಿ ಕೆಂಪಮ್ಮನಿಗೆ ಕೊಡಬೇಕಾಗಿದ್ದ ಸಾಲ" ಎಂದೆ ನಾನು.

ಕೆಂಪಮ್ಮನ ಗಂಡ ಕಣ್ಣೀರು ಒರಸಿಕೊಳ್ಳುತ್ತ ನಮ್ಮ ತನ್ನ ಕೃತಜ್ಞತೆ ಸೂಚಿಸಿ ಎದ್ದು ಹೊರಟುಹೋದ. ಅವನ ಮುಖ ನೋಡಿದರೆ ಇನ್ನೂ ಬಹಳ ಮಾತಾಡಬೇಕೆಂದು ಇದ್ದಂತೆ ತೋರಿತು. ನನ್ನ ಗೆಳೆಯನ ಮುಖ ನೋಡಿದೆ, ಅವನ ಕೆನ್ನೆಯ ಮೇಲೆ ಕಂಬನಿ ಇತ್ತು. "ನೀನು ಗೆದ್ದೆ, ಪಣ ಕೊಟ್ಟುಬಿಟ್ಟಿದ್ದೇನೆ" ಎಂದ. "ನನ್ನ ಗೆಲವಿಗೆ ಬೆಂಕಿಹಾಕಿತು. ನಾನು ಗೆಲ್ಲುವುದಕ್ಕೆ ಕೆಂಪಮ್ಮ ಸಾಯಬೇಕಾಗಿತ್ತೆ?" ಎಂದೆ. ಎಷ್ಟು ತಡೆದು ಕೊಂಡರೂ ಆಗಲಿಲ್ಲ; ನನ್ನ ಕಣ್ಣಿಂದಲೂ ಕಂಬನಿ ಕೋಡಿ ಹರಿಯಿತು.

# ಬೊಲೆಸ್ಲೊ

ಒಂದು ದಿನ ನನ್ನ ಗೆಳೆಯನೊಬ್ಬ ನನಗೆ ಹೇಳಿದ್ದು ಇದು: ನಾನು ಮಾಸ್ಕೋದಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಒಂದು ಸಣ್ಣ ಮನೆಯಲ್ಲಿ ವಾಸಮಾಡಿಕೊಂಡಿದ್ದೆ; ಅಲ್ಲಿ ನನ್ನ ನೆರೆಯವಳು ಒಬ್ಬಳು ವಿಚಿತ್ರ ಹೆಣ್ಣು ಮಗಳು. ಅವಳು ಪೋಲಿಷರವಳು; ಹೆಸರು ಟೆರಿಸ. ಎತ್ತರವಾಗಿ, ಬಲ ವಾಗಿದ್ದಳು; ಬಣ್ಣ ಕಂದು; ಕೊಡಲಿಯಿಂದ ಕೆತ್ತಿ ಮಾಡಿದವೋ ಎಂಬಂತೆ

ದ್ದವು. ಅವಳ ದಪ್ಪನೆಯ ಕುರುಗು ಹುಬ್ಬುಗಳು, ಒರಟು ಮುಖ ಲಕ್ಷಣ ಗಳು. ಅವಳ ಕಣ್ಣುಗಳು ಮಂಕಾಗಿದ್ದುವು, ದನಿ ಜೋರಾಗಿತ್ತು, ನಡೆ ನುಡಿ ಮುಷ್ಟಿಕಾಳಿಗದಲ್ಲಿ ಹಣಕ್ಕಾಗಿಹೋರಾಡುವ ಹೋರಾಳುವಿನ ನಡೆನುಡಿ ಯನ್ನು ನೆನಪಿಗೆ ತರುತ್ತಿದ್ದುವು ಅವಳ ಕಾಯ ಸ್ಥೂಲವಾಗಿಯೂ ಬಲಿಷ್ಠ ವಾಗಿಯೂ ಇದ್ದು, ಅವಳ ಒಟ್ಟು ಸ್ವರೂಪ ಭಯ ಹುಟ್ಟಿಸುವಷ್ಟು ವಿಕಾರ ವಾಗಿತ್ತು. ಕಡೆಯುಪ್ಪರಿಗೆಯಲ್ಲಿ ನಮ್ಮ ಕೋಣೆಗಳು ಎದುರುಬದುರಾಗಿ ದ್ದುವು. ಅವಳು ಮನೆಯಲ್ಲಿರುವುದಾಗಿ ನನಗೆ ತಿಳಿದಿದ್ದರೆ ನಾನು ನನ್ನ ಕೋಣೆಯ ಬಾಗಿಲನ್ನೇ ತೆರೆಯುತ್ತಿರಲಿಲ್ಲ. ಕೆಲವು ವೇಳೆ ಮಹಡಿ ಮೆಟ್ಟಲು ಗಳ ಮೇಲೋ ಇಲ್ಲವೆ ಅಂಗಳದಲ್ಲೋ ಅವಳನ್ನು ಸಂಧಿಸುತ್ತಿದ್ದೆ; ಅಂದು ಅವಳು ನನ್ನನ್ನು ನೋಡಿ ವ್ಯಂಗ್ಯವಾಗಿ ನಗುತ್ತಿದ್ದಳು. ಅನೇಕ ವೇಳೆ ಅವಳು ಮನೆಗೆ ಹಿಂದಿರುಗಿ ಬರುತ್ತಿದ್ದಾಗ ಅವಳನ್ನು ಸಂಧಿಸುತ್ತಿದ್ದೆ; ಆಗ ಅವಳ ಕಣ್ಣುಗಳು ಕೆಂಪಗಿರುತ್ತಿದ್ದವು, ತಲೆಗೂದಲು ಕೆದರಿರುತ್ತಿತ್ತು. ಅಂಥ ಸಮಯಗಳಲ್ಲಿ ಅವಳು ನನ್ನನ್ನು ಲಜ್ಜೆಯಿಲ್ಲದೆ, ಮರ್ಯಾದೆಯಿಲ್ಲದೆ, ದಿಟ್ಟಿಸಿ ನೋಡುತ್ತಿದ್ದಳು. ತರುವಾಯ ಹೀಗೆ ಸಂಬೋಧಿಸುತ್ತಿದ್ದಳು: "ಓಹೋ, ವಿದ್ಯಾರ್ಥಿಗಳೇ!"

ಅವಳ ಪೆದ್ದುನಗೆ ಅಸಹ್ಯಕರವಾಗಿತ್ತು. ನನ್ನ ಕೋಣೆ ಬೇಕಾದರೂ ಬದಲಾಯಿಸಲು ಸಿದ್ಧನಾಗಿದ್ದೆ—ಅವಳಿಗೆ ಕಾಣಿಸಿಕೊಳ್ಳದೆ ಇರುವುದಕ್ಕಾಗಿ. ಆದರೆ, ಸ್ಥಳ ಬಹು ಸೊಗಸಾಗಿತ್ತು: ನಗರದ ನೋಟಕ್ಕೆ ಯಾವ ಅಡಚಣೆಯೂ ಇರಲಿಲ್ಲ; ಬೀದಿ ಶಾಂತವಾಗಿತ್ತು; ಆದ್ದರಿಂದ ಅಲ್ಲಿಯೇ ಉಳಿದಿದ್ದೆ.

ಒಂದು ದಿನ ಬೆಳಗ್ಗೆ, ಉಡುಪು ಹಾಕಿಕೊಂಡು ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದಾಗ, ಇದ್ದಕ್ಕಿದ್ದ ಹಾಗೆ ಬಾಗಿಲು ತೆರೆಯಿತು; ಹೊಸಿಲ ಮೇಲೆ ಟೆರಿಸ ಕಾಣಿಸಿಕೊಂಡಳು.

"ಏನು, ವಿದ್ಯಾರ್ಥಿಗಳೇ!" ಎಂದು ಸಂಬೋಧಿಸಿದಳು ಅವಳು ತನ್ನ ಹೆದ್ದನಿಯಲ್ಲಿ.

"ನಿನಗೇನು ಬೇಕಮ್ಮ?"—ನಾನು ಕೇಳಿದೆ.

ಅವಳನ್ನು ನೋಡಿದೆ: ಕಲಕಗೊಂಡ ಲಜ್ಜಾಭಾವದ ಮುದ್ರೆಯನ್ನು ತಳೆದಿತ್ತು ಅವಳ ಮುಖ; ಆ ಭಾವವನ್ನು ನಾನು ಹಿಂದೆಂದೂ ಕಂಡಿರಲಿಲ್ಲ ಅವಳ ಮುಖದಲ್ಲಿ.

"ನಿಮ್ಮಿಂದ ಒಂದು ಉಪಕಾರ ಆಗಬೇಕೆಂದು ಕೇಳಬೇಕೆಂದಿದ್ದೇನೆ, ದಯವಿಟು ಇಲ್ಲವೆನ್ನಬೇಡಿ!"

"ಇದೊಂದು ನೆಪ" ಎಂದು ನನ್ನಷ್ಟಕ್ಕೆ ನಾನೇ ಅಂದುಕೊಂಡೆ, ಹಾಸಿಗೆಯ ಮೇಲೆ ಮಲಗಿ. ಆದರೆ ಬಾಯಿ ಬಿಡಲಿಲ್ಲ.

"ಮನೆಗೊಂದು ಕಾಗದ ಬರೆಯಬೇಕಾಗಿದೆ" ಎಂದು ಮುಂದುವರಿಸಿದಳವಳು.

"ಅವಳ ಮನಸ್ಸಿನಲ್ಲಿ ಏನಿರಬಹುದೋ?" ಎಂದು ಯೋಚಿಸಿದೆ ನಾನು. ಹಾಸಿಗೆಯಿಂದ ನೆಗೆದೆದ್ದು, ಮೇಜಿನ ಮುಂದೆ ಕುಳಿತುಕೊಂಡೆ, ಕಾಗದ ಮಸಿ ಹವಣಿಸಿಕೊಂಡೆ, "ಒಳಕ್ಕೆ ಬಾರಮ್ಮಾ; ಕುಳಿತುಕೊ; ಬೇಕಾದ್ದನ್ನು ಹೇಳು, ಬರೆದುಕೊಡುತ್ತೇನೆ" ಎಂದೆ.

ಅವಳು ಒಳಕ್ಕೆ ಬಂದು, ಎಚ್ಚರಿಕೆಯಿಂದ ಕುಳಿತುಕೊಂಡಳು; ನನ್ನ ಕಣ್ಣುಗಳ ಕಡೆ ತೀಕ್ಷ್ಣ ದೃಷ್ಟಿಯಿಂದ ನೋಡಿದಳು.

"ಒಳ್ಳೆಯದು, ಕಾಗದ ಯಾರಿಗೆ ಬರೆಯಲಿ?" ಎಂದು ಕೇಳಿದೆ.

"ವಾರ್ಸಾ (Warsaw) ರೈಲು ರಸ್ತೆಯ ಮೇಲೆ ಸ್ವೆನ್ಸಿಯಾನಿ (Swenziani) ಇದೆಯಲ್ಲ, ಅಲ್ಲಿ ವಾಸಮಾಡುತ್ತಾರಲ್ಲ ಬೊಲೆಸ್ಲೊ ಕಾಷ್‌ಪು (Boleslov Kaschput), ಅವರಿಗೆ"

"ಅವರಿಗೆ ಏನು ಬರೆಯಲಿ? ಹೇಳು."

"'ನನ್ನ ಪ್ರಿಯ ಬೊಲೆಸ್–ನನ್ನ ಪ್ರಿಯತಮಾ–ನನ್ನ ಪ್ರೇಮವೇ–ನನ್ನ ಪ್ರಾಣಪದಕವೇ–ಮೇರಿ ಮಹಾತಾಯಿ ನಿನ್ನನ್ನು ಕಾಪಾಡಲಿ! ನನ್ನ ಪ್ರಿಯನೇ, ಇಷ್ಟು ದೀರ್ಘಕಾಲವಾದರೂ ನಿನ್ನ ಮುದ್ದು ಪಾರಿವಾಳಕ್ಕೆ, ಇಷ್ಟೊಂದು ವ್ಯಸನ ಪಡುತ್ತಿರುವ ನಿನ್ನ ಟೆರಿಸಾಗೆ, ಏಕೆ ಇನ್ನೂ ಬರೆದಿಲ್ಲ!'"

ಅವಳನ್ನು ನೋಡಿ ನಗದೆ ಇರಲಾಗಲಿಲ್ಲ. "ವ್ಯಸನಪಡುತ್ತಿರುವ ಚಿಕ್ಕ ಪಾರಿವಾಳ!"–ಸುಮಾರು ಆರು ಅಡಿ ಎತ್ತರದ, ಗಟ್ಟಿಮುಟ್ಟಾದ ಮೈಕಟ್ಟನ್ನೂ ವ್ಯಾಯಾಮಪಟುವಿನ ಮುಷ್ಟಿಗಳನ್ನೂ ಹೊಂದಿದ್ದ 'ಪಾರಿವಾಳ'–

ತನ್ನ ಬದುಕಿನಲ್ಲಿ ಸದಾ ಕಾಲವೂ ಹೊಗೆಕೊಳವೆ (chimney) ಗಳೊಳಕ್ಕೆ ನುಗ್ಗಿ ಅವನ್ನು ಝಾಡಿಸುವುದಲ್ಲದೆ ಬೇರೆ ಇನ್ನೇನೂ ಕೆಲಸ ಕಾಣದೋ ಎಂಬಂತೆ ಕಪ್ಪಗಿದ್ದ ಮುಖವುಳ್ಳ ಈ ಚಿಕ್ಕ ಪಾರಿವಾಳವನ್ನು ನೆನೆದರೆ ನಗು ಬರದೆ ಇನ್ನೇನು!

ಆದರೆ, ಗಂಭೀರ ಮುಖ ಭಾವದಿಂದಲೇ ಕೇಳಿದೆ: "ಈ ಬೊಲೆಸ್ಲೊ ಯಾರು?"

"ಬೊಲೆಸ್ಲೆ, ಅಣ್ಣಾ?" ಎಂದು ಆಶ್ಚರ್ಯಭಾವದಿಂದ ಕೇಳಿದಳು: ಬೊಲೆಸ್ಲೊ ಯಾರಿಗೂ ಗೊತ್ತಿಲ್ಲ ಎಂದರೆ ನಂಬಲಾಗದ ಮಾತು ಎನ್ನುವಂತೆ. "ಬೊಲೆಸ್, ನನ್ನನ್ನು ಮದುವೆಯಾಗಲು ಮಾತುಕೊಟ್ಟಿರುವ ನನ್ನ ಪ್ರಿಯ––"

"ಮದುವೆಯಾಗಲು ಮಾತುಕೊಟ್ಟಿರುವವನೆ?"

"ಯಾಕಪ್ಪ, ಇಷ್ಟೊಂದು ಆಶ್ಚರ್ಯಪಡುತ್ತೀರಿ? ನನ್ನಂಥ ಎಳೆಯ ಹುಡುಗಿಗೆ ನಲ್ಲನಿರಕೂಡದೆ?"

"ಎಳೆಯ ಹುಡುಗಿ!"––ಎಂಥ ವಿನೋದ! ನಾನು ಹೇಳಿದೆ: "ಎಲ್ಲವೂ ಸಾಧ್ಯವಿರಬಹುದು. ಮದುವೆಯು ನಿಶ್ಚಿತಾರ್ಥವಾಗಿ ಎಷ್ಟು ಕಾಲವಾಯಿತು?"

"ಹತ್ತು ವರ್ಷ".

ಅಂತೂ ಕೊನೆಗೊಂದು ಕಾಗದ ಬರೆದುಕೊಟ್ಟೆ ಅವಳಿಗೆ: ಅದು ಎಷ್ಟು ಪ್ರೇಮಪೂರ್ಣವಾಗಿ, ಮರುಕಹುಟ್ಟಿಸುವುದಾಗಿತ್ತೆಂದರೆ, ಟೆರಿಸ ಅಲ್ಲದೆ ಬೇರೆ ಇನ್ನಾವಳಿಂದ ಆ ಪ್ರೇಮ ಸಂದೇಶ ಬರುವುದಾಗಿದ್ದರೂ ಬೊಲೆಸ್ಲೋವಿನ ಸ್ಥಾನದಲ್ಲಿರಬಯಸುತ್ತಿದ್ದೆ ನಾನು: ಅಷ್ಟು ಪ್ರೇಮಸೂಸುವ, ಎದೆ ಕರಗಿಸುವ ಪತ್ರವಾಗಿತ್ತು ನಾನು ಬರೆದುಕೊಟ್ಟದ್ದು.

ಟೆರಿಸ ಹೇಳಿದಳು: "ನಿಮಗೆ ಮನಸಾರ ವಂದನೆಗಳು. ನಿಮಗೆ ಏನಾದರೂ ಪ್ರತ್ಯುಪಕಾರ ಮಾಡುವುದಿದೆಯೆ?" ಬಹಳ ಉದ್ವೇಗಗೊಂಡವಳಂತೆ ಕಾಣುತ್ತಿದ್ದಳು ಅವಳು.

"ಏನೂ ಇಲ್ಲ, ಪರವಾಯಿಲ್ಲ".

"ನಿಮ್ಮ ಷರಟುಗಳನ್ನೂ ಬಟ್ಟೆಬರೆಗಳನ್ನೂ ಹರಿದಿದ್ದರೆ ಹೊಲಿದು ಸರಿಮಾಡಿಕೊಡಬಲ್ಲೆ." ಈ ಮಾತು ನನ್ನನ್ನು ತುಂಬ ಬೇಸರಪಡಿಸಿತು. ನನಗೆ ಖಂಡಿತವಾಗಿಯೂ ಆವಳಿಂದ ಯಾವ ಬಗೆಯ ಪ್ರತಿಫಲವೂ ಬೇಕಿಲ್ಲವೆಂದು ಅವಳಿಗೆ ಸಂಕ್ಷೇಪವಾಗಿ ಒತ್ತಿ ಹೇಳಿದೆ. ಅವಳು ಹೊರಟು ಹೋದಳು.

ಎರಡು ವಾರಗಳು ಕಳೆದುವು. ಒಂದು ದಿನ ಸಂಜೆ, ಬೇಸರ ಕಳೆಯುವುದಕ್ಕಾಗಿ ಏನು ಮಾಡುವುದೆಂದು ಯೋಚಿಸುತ್ತ, ಶಿಳ್ಳೆ ಹಾಕುತ್ತ ಕಿಟಕಿಯ ಬಳಿ ಕುಳಿತಿದ್ದೆ. ಹೊರಗಡೆ ಹವಾ ಅಧ್ವಾನವಾಗಿತ್ತು; ಹೊರಕ್ಕೆ ಹೊರಡಲು ಇಷ್ಟವಿರಲಿಲ್ಲ ತಟ್ಟನೆ ಬಾಗಿಲು ತೆರೆಯಿತು.

"ಅಯ್ಯೋ ದೇವರೆ! ಯಾರೋ ಬರುತ್ತಿರುವ ಹಾಗಿದೆಯೆ!" ಎಂದುಕೊಂಡೆ.

"ನಿಮಗೆ ಈಗ ತುಂಬ ಕೆಲಸವೆಂದು ಕಾಣುತ್ತೆ?" ಬಂದವಳು ಟೆರಿಸ. ಇವಳಲ್ಲದೆ ಬೇರೆ ಯಾರು ಬಂದಿದ್ದರೂ ಪರವಾಯಿರಲಿಲ್ಲ.

"ಏನೂ ಇಲ್ಲ. ಯಾಕೆ?"

"ನನಗೆ ಇನ್ನೊಂದು ಕಾಗದ ಬರೆದುಕೊಡುತ್ತೀರ?"

"ಆಗಬಹುದು. ಬೊಲೆಸ್ಲಿಗೊ?"

"ಅಲ್ಲ. ನನಗೆ"

"ನಿನಗೆ!"

"ಹೌದು. ನನಗೆ, ಅವನ ಉತ್ತರ...."

"ಏನು!"

"ದಯವಿಟ್ಟು ಕ್ಷಮಿಸಿ; ನಾನು ತಿಳಿಗೇಡಿ. ನಾನು ನಿಮಗೆ ತಿಳಿಯುವ ಹಾಗೆ ಮಾತಾಡಲಿಲ್ಲ. ಕಾಗದ ನನಗಲ್ಲ; ನನ್ನ ಸ್ನೇಹಿತರ ಪೈಕಿ ಒಬ್ಬರಿಗೆ–ಅಂದರೆ, ಅಂಥ ಸ್ನೇಹಿತರೇನಲ್ಲ, ಒಬ್ಬರು ಪರಿಚಯಸ್ಥರು. ಆತನಿಗೆ ಬರೆಯುವುದಕ್ಕೆ ಬರುವುದಿಲ್ಲ–ನನ್ನ ಹಾಗೆ ಒಬ್ಬಾಕೆಗೆ ಮದುವೆಯ ವಾಗ್ದಾನ ಮಾಡಿದ್ದಾನೆ—"

ನಾನು ಒಮ್ಮೆ ಅವಳ ಕಡೆ ನೋಡಿದೆ. ಅವಳು ನಾಚಿಕೆಗೊಂಡವಳಂತೆ ಕಾಣುತ್ತಿದ್ದಳು; ಅವಳ ಕೈಗಳು ನಡುಗುತ್ತಿದ್ದುವು; ಅವಳು ಕಕ್ಕಾಬಿಕ್ಕಿಯಾಗಿದ್ದಳು. ಅವಳ ವಿಚಾರ ನನಗೆ ಗೊತ್ತಾದಂತೆ ಬಗೆದೆ.

ಅವಳಿಗೆ ಎಚ್ಚರಿಕೆ ಕೊಟ್ಟೆ: "ಇಲ್ಲಿ ಕೇಳು. ನಿನ್ನ ವಿಚಾರ, ನಿನ್ನ ಬೊಲೆಸ್ಲೊ ವಿಚಾರ—ಮುಂತಾಗಿ ನೀನು ನನ್ನೊಡನೆ ಹೇಳುತ್ತಿರುವುದೆಲ್ಲ ಶುದ್ಧಾಂಗವಾಗಿ ನಿನ್ನ ಸೃಷ್ಟನೆ; ನೀನು ನನಗೆ ಸುಳ್ಳು ಹೇಳುತ್ತಿದ್ದೀಯೆ. ನೀನು ಇಲ್ಲಿಗೆ ಬರುವುದಕ್ಕೆ ಇದೆಲ್ಲಾ ಒಂದು ನೆಪ. ಇನ್ನುಮೇಲೆ ನಿನ್ನ ಮುಖ ಕೂಡ ನೋಡಲು ಇಷ್ಟವಿಲ್ಲ ನನಗೆ, ತಿಳಿಯಿತೋ ?"

ಅವಳು ಬೆದರಿದಂತೆ ಕಂಡುಬಂತು. ಅವಳ ಮುಖ ಕೆಂಪೇರಿತು; ಏನನ್ನೋ ಹೇಳಬೇಕೆಂದು ಬಹುಕಷ್ಟದಿಂದ ಪ್ರಯತ್ನಪಡುತ್ತಿದ್ದಳು. ಅವಳ ವಿಷಯವಾಗಿ ತಪ್ಪು ತಿಳಿದಿದ್ದೇನೆಂದು ತೋರತೊಡಗಿತು ನನಗೆ. ಅಂತೂ, ಒಳ್ಳೆಯ ನಡತೆಯ ದಾರಿಯಿಂದ ಕೆಟ್ಟ ದಾರಿಗೆ ನನ್ನನ್ನು ಸೆಳೆಯುವ ದುರ್ಭಾವನೆಯಿಂದ ಅವಳು ಬಂದಿರಲಿಲ್ಲ. ಆದರೆ, ಅವಳು ಹೀಗೆ ಬರುತ್ತಿದ್ದುದರಲ್ಲಿ ಏನೋ ಉದ್ದೇಶವಿತ್ತು. ಅದು ಏನೊ ?

"ವಿದ್ಯಾರ್ಥಿಗಳೇ—" ಎಂದು ಮೊದಲುಮಾಡಿದಳು; ಆದರೆ, ಇದ್ದಕ್ಕಿದ್ದ ಹಾಗೆಯೇ ಮುಖ ತಿರುಗಿಸಿ, ಕೋಣೆಯಿಂದ ಹಿಂದಿರುಗಿ ಹೊರಟು ಹೋದಳು.

ನನ್ನ ಹೃದಯದಲ್ಲಿ ಏನೋ ತಳಮಳವಾದಂತಾಯಿತು. ಅವಳು ತನ್ನ ಕೋಣೆಯ ಬಾಗಿಲನ್ನು ಧಡಾರನೆ ಹಾಕಿಕೊಂಡದ್ದು ನನಗೆ ಕೇಳಬಂತು. ಅವಳು ಕೋಪಗೊಂಡಿದ್ದಳು. ಒಂದು ಕ್ಷಣ ಹಾಗೆಯೇ ಯೋಚಿಸಿ, ಅವಳನ್ನು ಹಿಂದಕ್ಕೆ ಕರೆಯುವುದೆಂದು ತೀರ್ಮಾನಿಸಿದೆ. ಅವಳಿಗೆ ಕಾಗದ ಬರೆದು ಕೊಡೋಣವೆನ್ನಿಸಿತು. ಅವಳಿಗಾಗಿ ವ್ಯಥೆಯುಂಟಾಯಿತು.

ಅವಳ ಕೋಣೆಗೆ ಹೋದೆ. ಅವಳು ಕೈಗಳಿಂದ ಮುಖ ಮುಚ್ಚಿಕೊಂಡು ಕುಳಿತಿದ್ದಳು.

"ಅಯ್ಯೋ, ಹುಡುಗೀ! ನೀನು—" ಎಂದು ಅವಳನ್ನು ಸಂತೈಸಹೋದೆ.

ಕಥೆಯಲ್ಲಿ ಈ ಭಾಗಕ್ಕೆ ಬಂದಾಗ ನನ್ನ ಮನಸ್ಸು ಕರಗಿಹೋಗುತ್ತದೆ. ಅವಳು ತಟ್ಟನೆ ಎದ್ದು, ನೆಟ್ಟಗೆ ನನ್ನ ಬಳಿಗೆ ಬಂದಳು; ಕಣ್ಣುಗಳು ಹೊಳೆಯುತ್ತಿದ್ದುವು; ನನ್ನ ಹೆಗಲ ಮೇಲೆ ತನ್ನ ತೋಳುಹಾಕಿ, ಎದೆ ಬಿರಿಯುವಂತೆ ಅಳತೊಡಗಿದಳು.

"ಈ–ಕೆಲವು–ಕೆಲವು ಪಂಕ್ತಿಗಳನ್ನು–ಬರೆದುಕೊಡಲು–ನಿಮಗೆ–ನಿಮಗೆ –ಏನು ತೊಂದರೆ? ಯಾಂಗೆ–ಆದರೆ–ನಿಮಗೇನು–ಬಾಧಕ? ಮೊದಲು– ಮೊದಲು ಅಷ್ಟು–ಅಷ್ಟು ಒಳ್ಳೆಯವನಾಗಿ ಕಂಡಿರಿ! ಹೌದು–ಬೊಲೆಸ್ಲೊ ಯಾರೂ ಇಲ್ಲ–ಟೆಂಸ–ಟೆಂಸಾನೂ ಇಲ್ಲ. ಇರುವವಳು ನಾನು ಮಾತ್ರ– ನಾನೇ–ನಾನೊಬ್ಬಳೇ!"

ಅವಳ ಮಾತುಗಳನ್ನು ಕೇಳಿ ಕ್ಷಣಕಾಲ ದಂಗುಬಡಿದು ಹೋದೆ ಅಚ್ಚರಿ ಯಿಂದ, "ಏನು! ಬೊಲೆಸ್–ಬೊಲೆಸ್ಲೊ ಎಂಬಾತ ಇಲ್ಲವೇ ಇಲ್ಲವೆ?" ಎಂದೆ.

"ಇಲ್ಲ".

"ಟೆಂಸಾನೂ ಇಲ್ಲವೆ?"

"ಇಲ್ಲ–ಅಂದರೆ–ಆದರೆ–ನಾನೇ ಟೆಂಸ".

ನನ್ನ ತಲೆ ಗಿರ್ರನೆ ತಿರುಗತೊಡಗಿತು. ಬೆರಗು ನೋಟದಿಂದ ಅವಳ ಕಡೆ ನೋಡಿದೆ. ನಮ್ಮಿಬ್ಬರಲ್ಲಿ ಯಾರದೋ ಒಬ್ಬರ ತಲೆ ಕೆಟ್ಟಿರಬೇಕು; ಅದು ಖಂಡಿತ. ಅವಳು ಮೇಜಿನ ಬಳಿ ಹೋಗಿ, ಸೆಳೆಖಾನೆಯಲ್ಲಿ ತಡಕಾಡಿ, ಒಂದು ಚೂರು ಕಾಗದ ತಂದಳು.

"ಇದೋ ನೋಡಿ, ನೀವು ಬರೆದುಕೊಟ್ಟ ಕಾಗದ; ಅದನ್ನು ಹಿಂದಕ್ಕೆ ತೆಗೆದುಕೊಳ್ಳಿ. ಇನ್ನೊಂದು ಕಾಗದ ಬರೆದುಕೊಡಲು ನಿಮಗೆ ಇಷ್ಟವಿಲ್ಲ. ನಿಮಗಿಂತ ಹೆಚ್ಚು ಕರುಣೆಯುಳ್ಳವರು ಯಾರನ್ನಾದರೂ ಕೇಳಿ ಕೊಂಡರೆ ಬರೆದುಕೊಟ್ಟಾರು".

ಅವಳ ಬೊಲೆಸ್ಲೋವಿಗೆ ಅವಳಿಗಾಗಿ ನಾನು ಬರೆದುಕೊಟ್ಟಿದ್ದ ಕಾಗದ ವನ್ನು ಅವಳು ಕೈಲಿ ಹಿಡಿದಿದ್ದಳು. ಇದರ ಅರ್ಥವೇನೋ ದೇವರೇ ಬಲ್ಲ ಎಂದುಕೊಂಡೆ.

"ಟೆರಿಸಾ, ಇಲ್ಲಿ ಕೇಳು. ಇದು ಏನು? ಇದನ್ನು ನೀನು ಅಂಚೆಗೆ ಹಾಕದೆ ಇರುವಾಗ, ಬೇರೆಯವರೇಕೆ ನಿನಗಾಗಿ ಕಾಗದಗಳನ್ನು ಬರೆದು ಕೊಡಬೇಕು?"

"ಇವನ್ನು ಯಾರಿಗೆ ಅಂಚೆಗೆ ಹಾಕಲಿ?"

"ಯಾರಿಗೆ ಅಂದರೆ! ಬೊಲೆಸ್ಲೋವಿಗೆ-ನಿನ್ನನ್ನು ಮದುವೆಯಾಗುತ್ತೇನೆಂದು ಹೇಳಿರುವವನಿಗೆ!"

"ಆದರೆ—ಅಂಥವನೊಬ್ಬನು ಯಾರೂ ಇಲ್ಲ".

ನನಗೆ ಏನು ಹೇಳುವುದಕ್ಕೂ ತೋರಲಿಲ್ಲ. ಸುಮ್ಮನಾದೆ. ಹೊರಟು ಹೋಗುವುದಲ್ಲದೆ ಬೇರೆ ಮಾರ್ಗವೇ ಇರಲಿಲ್ಲ. ಆದರೆ ಅವಳು ಮತ್ತೆ ಮೊದಲು ಮಾಡಿದಳು:

"ಇಲ್ಲ; ಅವನು-ಇಲ್ಲ; ಬೊಲೆಸ್ಲೊ ಇಲ್ಲ" ಎಂದು ಒಂದು ಬಗೆಯ ಕೈಗಳ ಚೇಷ್ಟೆಯೊಡನೆ ಹೇಳಿದಳು; ಹೇಳಬೇಕೆಂದಿದ್ದುದನ್ನು ವಿವರಿಸುವುದು ಅಸಾಧ್ಯವೆಂಬುದು ಅದರಿಂದ ವ್ಯಕ್ತವಾಗುತ್ತಿತ್ತು.

ಅವಳು ಮುಂದುವರಿಸಿದಳು: "ಆದರೆ, ಅವನು ಬದುಕಿದ್ದಿರಬೇಕೆಂದು ನನ್ನ ಆಸೆ. ನಾನು ಇತರರಂತಲ್ಲ. ನನಗೆ ಗೊತ್ತು—ನಾನು ಎಂಥವಳೆಂಬುದು ನನಗೆ ಗೊತ್ತು.—ಆದರೆ, ನಾನು ಅವನಿಗೆ ಬರೆಯುವುದರಿಂದ ಯಾರಿಗೂ ತೊಂದರೆಯಾಗುವುದಿಲ್ಲ".

"ಹಾಗೆಂದರೆ? ಯಾರಿಗೆ?"

"ಯಾರಿಗೆ! ಮತ್ತೆ ಯಾರಿಗೆ, ಬೊಲೆಸ್ಲೋಗೆ!"

"ಆದರೆ ಈಗ ತಾನೆ ನೀನು ಹೇಳಿದೆ, ಅಂಥ ವ್ಯಕ್ತಿ ಯಾರೂ ಇಲ್ಲ ಎಂದು!" ಎಂದು ನಾನೆಂದೆ, ಮೊದಲಿನಂತೆಯೇ ಕಕ್ಕಾಬಿಕ್ಕಿಯಾಗಿ.

"ಅಯ್ಯೋ, ದೇವರೇ! ಇಲ್ಲದೆಹೋದರೆ ಅದರಿಂದ ನನಗೇನು! ಯಾರೂ ಇಲ್ಲ, ನಿಜ; ಆದರೆ, ಬೊಲೆಸ್ಲೋ ಇದ್ದಾನೆಂದು ನನ್ನ ಕಲ್ಪನೆ. ಅವನು ವಾಸ್ತವವಾಗಿ ಬದುಕಿದ್ದಿದ್ದರೆ ಹೇಗೋಹಾಗೆ ಆತನಿಗೆ ಬರೆಯುತ್ತೇನೆ; ಆತ ನನಗೆ ಉತ್ತರ ಕೊಡುತ್ತಾನೆ; ನಾನು ಮತ್ತೆ ಬರೆಯುತ್ತೇನೆ, ಮತ್ತೆ ಆತ ಮಾರುತ್ತರ ಕೊಡುತ್ತಾನೆ—".

ಕಟ್ಟಕಡೆಗೆ ನನಗೆ ಅರ್ಥವಾಯಿತು.

ದೇಹದ ನೋವಿನಿಂದ ಹೇಗೊ ಹಾಗೆ ಧಕ್ಕೆ ತಗುಲಿದಂತಾಗಿ, ಏನೋ ಅಪರಾಧವೆಸಗಿದಂತೆ ಭಾವನೆಯಾಯಿತು, ನಾಚಿಕೆಯಾಯಿತು. ನನ್ನ ಬಳಿಯಲ್ಲಿ, ತೋಳು ಚಾಚಿನಷ್ಟು ಹತ್ತಿರದಲ್ಲಿ, ಇದ್ದ ಈ ಮಾನವ ಪ್ರಾಣಿಗೆ ಪ್ರೀತಿಯ ಲವಲೇಶವನ್ನು ತೋರುವವರೊಬ್ಬರಿರಲಿಲ್ಲ ಪ್ರಪಂಚದಲ್ಲಿ; ತಂದೆ ತಾಯಿಯಿಲ್ಲ; ಕೆಳೆಯರಿಲ್ಲ, ಯಾರೂ ಇಲ್ಲ! ಈ ಬಡಪ್ರಾಣಿ ತನಗಾಗಿ ಒಬ್ಬ ಇನಿಯನನ್ನು, ಮದುಮಗನನ್ನು, ಸೃಷ್ಟಿಸಿಕೊಂಡಿತ್ತು!

ಅವಳು ತನ್ನ ಬೇಸರ ಹಿಡಿಸುವ ಗೊರಗು ದನಿಯಲ್ಲಿ ಮುಂದುವರಿಸಿದಳು: "ಈ ಕಾಗದವನ್ನು ನೀವು ನನಗಾಗಿ ಬೊಲೆಸ್ಲೋಗೆ ಬರೆದಿರಿ—ಅದನ್ನು ನನಗೆ ಗಟ್ಟಿಯಾಗಿ ಓದಿ ಹೇಳುವಂತೆ ಬೇರೊಬ್ಬರನ್ನು ಕೇಳಿಕೊಂಡೆ. ಕಾಗದ ಕೇಳಿ, ಬೊಲೆಸ್ಲೊ ಬದುಕಿದ್ದಾನೆಂದು ಬಗೆದೆ. ಆಮೇಲೆ, ಬೊಲೆಸ್ಲೋವಿನಿಂದ ಟೆರಿಸ್ಸಾಗೆ – ಅಂದರೆ ನನಗೆ—ಉತ್ತರ ಬೇಕೆಂದು ಕೋರಿದೆ. ಬೊಲೆಸ್ಲೊ ಎಲ್ಲಿಯೋ ಬದುಕಿರಬೇಕೆಂದು ನನಗೆ ಖಂಡಿತವಾಗಿ ಅನ್ನಿಸುತ್ತಿದೆ; ಎಲ್ಲೋ ನಾನರಿಯೆ.—ಹೀಗೆ, ನನಗೆ ಜೀವದಿಂದಿರಲು ಸಾಧ್ಯವಾಗಿದೆ. ಅಷ್ಟೊಂದು ಕಷ್ಟವಾಗಿಲ್ಲ, ಅಷ್ಟೊಂದು ಭಯಂಕರವಾಗಿಲ್ಲ, ಅಷ್ಟೊಂದು ಒಂಟಿಯಾಗಿಲ್ಲ!"

ಅಂತೂ, ಅಂದಿನಿಂದ ಮೊದಲ್ಗೊಂಡು, ವಾರಕ್ಕೆ ಎರಡು ದಿನ ಕ್ರಮವಾಗಿ, ಟೆರಿಸಾ ಇಂದ ಬೊಲೆಸ್ಲೋವಿಗೂ ಬೊಲೆಸ್ಲೋವಿನಿಂದ ಟೆರಿಸಾವಿಗೂ ಕಾಗದಗಳನ್ನು ಬರೆದೆ. ನಾನು ಅವುಗಳನ್ನು ಮನಃಪೂರ್ವಕವಾಗಿ ಬರೆದೆ; ಅವುಗಳು, ಅದರಲ್ಲೂ ಉತ್ತರಗಳು, ಭಾವಾವೇಶದಿಂದ ತುಂಬಿ ತುಳುಕುತ್ತಿದ್ದುವು. ಅವಳು ಕಾಗದಗಳನ್ನು ಓದಿಸಿ ಕೇಳುತ್ತಿದ್ದಳು, ಕೇಳಿ ಅಳುತ್ತಿದ್ದಳು, ನಗುತ್ತಿದ್ದಳು, ಸುಖಪಡುತ್ತಿದ್ದಳು. ಇದಕ್ಕೆಲ್ಲ ಪ್ರತಿಯಾಗಿ, ನನ್ನ ಬಟ್ಟೆ ಬರೆಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದಳು; ನನ್ನ ಷರಟುಗಳನ್ನೂ ಕಾಲುಚೀಲಗಳನ್ನೂ ಹರಿದಿದ್ದರೆ ಸರಿಪಡಿಸಿಕೊಡುತ್ತಿದ್ದಳು; ಜೋಡುಗಳನ್ನು ಒರಸಿ, ಟೋಪಿಯ ಧೂಳು ಝಾಡಿಸಿಡುತ್ತಿದ್ದಳು.

ಮೂರು ತಿಂಗಳುಗಳ ತರುವಾಯ ಏನೋ ಗುಮಾನಿಯ ಮೇಲೆ ಅವಳನ್ನು ದಸ್ತಗಿರಿಮಾಡಿ ಜೈಲಿಗೆ ಹಾಕಿದರು. ಅವಳನ್ನು ಮತ್ತೆ ಕಾಣಲಾಗಲಿಲ್ಲ. ಅವಳು ಸತ್ತುಹೋಗಿರಬೇಕು.

# ಕನ್ನಡಿಯಲ್ಲಿ ಕಂಡದ್ದು

"ಥೂ, ಹಾಳು ಕನ್ನಡಿ!" ಎಂದು ಕನ್ನಡಿಯನ್ನು ಶಪಿಸಿ ಬಾಚಣಿಗೆಯನ್ನು ಮೇಜಿನ ಮೇಲೆ ಕುಕ್ಕಿದ ಶೃಂಗಾರಪ್ರಿಯ ಶಂಕರ. ಅಲ್ಲ, ಕನ್ನಡಿಯನ್ನು ಬೈದದ್ದೇಕೆ? ಕನ್ನಡಿ ಮಾಡಿದ ಮಾಡಬಾರದ ಮಹಾ ಅಪರಾಧವೇನು?. ಇದ್ದದ್ದನ್ನು ಇದ್ದಂತೆ ತೋರುವ ಯಥಾರ್ಥದರ್ಶಿನಿ, ಸತ್ಯವಾದಿ—ಕನ್ನಡಿ. ಸಾಧಾರಣ ಮುಖವನ್ನು ಸೋರೆಕಾಯಿಯಂತೆಯೋ, ಬೂದಗುಂಬಳಕಾಯಿಯಂತೆಯೋ ವಿರೂಪಗೊಳಿಸಿ ಭೂತಾಕಾರದಲ್ಲಿ ಬಿಂಬಿಸಿ ತೋರುವ ಮೈಸೂರಿನ 'ಖಾಸ್‌ಬಂಗಲೆ'ಯಲ್ಲಿನ ಭೂತ ಕನ್ನಡಿಯೇನಲ್ಲ ತನ್ನ ಕನ್ನಡಿ. ಒಳ್ಳೆಯ ಜರ್ಮನ್ ಕನ್ನಡಿ; ಒಂದನೆಯ ಮಹಾ ಯುದ್ಧದ ಕಾಲದಲ್ಲಿ ಒಂದಕ್ಕೆ ಮೂರು ಬೆಲೆ ಕೊಟ್ಟು ಕೊಂಡದ್ದು; ಕೊಂಡಾಗ ಹೇಗಿತ್ತೋ ಹಾಗೆಯೇ ಹೊಚ್ಚ ಹೊಸದಾಗಿದೆ, ಸ್ವಚ್ಛವಾಗಿದೆ; ಅದರ ಚೌಕಟ್ಟಿನ ಬಣ್ಣದ ಮೆರುಗು ಕೂಡ ತೆಗೆದಿಲ್ಲ. ಅದನ್ನು ತೂಗಹಾಕಿರುವ ಎಡೆಯನ್ನು ಕೂಡ ಬದಲಾಯಿಸಿಲ್ಲ: ತನ್ನ ಮಂಚದ ಬಲ ಪಕ್ಕಕ್ಕೆ, ಗೋಡೆಯಂಚಿನಲ್ಲಿರುವ ಸಣ್ಣ ಮೇಜಿನ ಮೇಲುಗಡೆ ಓರೆಯಾಗಿ ಹೇಗೆ ಹಾಕಿತ್ತೋ ಹಾಗೆಯೇ, ಅದೇ ಸ್ಥಾನದಲ್ಲಿ, ಇದೆ. ತನ್ನ ಮುದ್ದು ಮಡದಿಯೊಡನೆ ಮಂಚದ ಮೇಲೆ ಸರಸವಾಡುತ್ತಾ ಮಲಗಿದ್ದಾಗ ಬಲಗಡೆ ತಿರುಗಿ ನೋಡಿದರೂ ಇಬ್ಬರ ಪ್ರತಿಬಿಂಬಗಳೂ ಕನ್ನಡಿಯಲ್ಲಿ ಕಾಣಬೇಕು; ಮಂಚದ ಮೇಲೆ ಪಕ್ಕಪಕ್ಕದಲ್ಲಿ ಕುಳಿತಿದ್ದಾಗಲೂ ಇಬ್ಬರೂ ಕಾಣಬೇಕು ಕನ್ನಡಿಯಲ್ಲಿ; ಮೇಜಿನ ಮುಂದೆ ಕುರ್ಚಿಯ ಮೇಲೆ ಕುಳಿತು ಅಲಂಕಾರ ಮಾಡಿಕೊಳ್ಳಲೂ ಅನುವಾಗಬೇಕು—ಇಷ್ಟೆಲ್ಲ ಉಪಯೋಗಗಳು ಸಾಧಿಸುವಂತೆ ಬಹು ಬುದ್ಧಿವಂತಿಕೆಯಿಂದ ಕನ್ನಡಿಯನ್ನು ತೂಗಕಟ್ಟಿದೆ! ಎಷ್ಟು ದಿನ ತಾನೂ ತನ್ನ ಮಡದಿಯೂ ಮಂಚದ ಮೇಲೆ ಒಬ್ಬರನ್ನೊಬ್ಬರು ತಬ್ಬಿಕೊಂಡು, ಕೆನ್ನೆ ಕೆನ್ನೆ ಒಂದುಮಾಡಿ ಕುಳಿತು, ತಾಂಬೂಲವನ್ನು ಸವಿಯುತ್ತ, ಜೋಡಿ ಕುಳಿತ ತಮ್ಮ 'ಜೋಡಿ'ಯನ್ನು ಕನ್ನಡಿಯಲ್ಲಿ ಒಂದೇ ಸಮನಾಗಿ ದಿಟ್ಟಿಸುತ್ತಾ ಮೈ ಮರೆತಿಲ್ಲ! ಹಲವು ವರ್ಷಗಳ ಹಿಂದೆ: ಆಗ ಇನ್ನೂ ಪದ್ಮ ಹುಟ್ಟಿರಲಿಲ್ಲ; ಮೀನ-ಮಿನಾಕ್ಷಿ-ಮನೆಗೆ ಬಂದು ಕೆಲವು ಕಾಲವಾಗಿತ್ತು; ಒಂದು

ದಿನ ಸಂಜೆ ತಾನು ಕಚೇರಿಯಿಂದ ಮನೆಗೆ ಬರುವ ಹೊತ್ತಿಗೆ ಮೀನ ಆಗ ತಾನೆ ಹೆರಳು ಹಾಕಿಕೊಂಡು ಹೂಮುಡಿದುಕೊಂಡು ಅದೇ ಕನ್ನಡಿಯ ಮುಂದೆ ಕುಳಿತು ಕುಂಕುಮವಿಟ್ಟುಕೊಳ್ಳುತ್ತಿದ್ದಳು. ತಾನು ಮೀನಾಕ್ಷಿಗೆ ಗೊತ್ತಾಗದಂತೆ ಮೆಲ್ಲನೆ ಬಂದು ಅವಳ ಹಿಂದೆ ನಿಂತು, ಇನ್ನೇನು ಅವಳ ಕಣ್ಣು ಮುಚ್ಚಬೇಕು, ಅಷ್ಟರಲ್ಲಿ ಅವಳು ಫಕ್ಕನೆ ತನ್ನ ಕೈಗಳನ್ನು ಹಿಡಿದುಕೊಂಡುಬಿಟ್ಟಳು. ಶಂಕರ ಮೋಸಹೋಗಿದ್ದ: ಆ ಕನ್ನಡಿ ಅವನ ಬರವನ್ನು ಮೀನಾಕ್ಷಿಗೆ ತಿಳಿಸಿಬಿಟ್ಟಿತ್ತು! ಆ ಕಾಲ ಎಷ್ಟು ಚೆನ್ನಾಗಿತ್ತು! ಎಷ್ಟು ಆನಂದದ ಕಾಲ! ಇಬ್ಬರೂ ತುಂಬು ಜವ್ವನದವರು; ತುಂಬು ಚೆಲುವಿನವರು. ತನ್ನ ಚೆಲುವು, ಗಂಡುಗಾಡಿ, ದಿನದಿನಕ್ಕೆ ಮಾಸಿಹೋಗುತ್ತಿರುವುದು ಈವರೆಗೂ ತನ್ನ ಅರಿವಿಗೆ ಬಂದಿರಲಿಲ್ಲ. ಈ ಹೊತ್ತು ಈ ಹಾಳು ಕನ್ನಡಿ ತನ್ನ ಕಪ್ಪು ಕೂದಲಿನಲ್ಲಿ ನರೆಕೂದಲನ್ನು, ಬಿಳಿಗೂದಲನ್ನು, ತೋರಿಸಿಕೊಟ್ಟಿದೆ!—ಒಂದೆ ನರೆಗೂದಲೋ, ಇನ್ನೂ ಹಲವಾರು ಇವೆಯೋ—ಎಂದು ಶಂಕರ ಚೆನ್ನಾಗಿ ಬಾಚಿಕೊಂಡಿದ್ದ ಕೂದಲನ್ನು ಕೆದರಿ ಕೆದರಿ, ಹಿಕ್ಕಿ ಹಿಕ್ಕಿ, ಬಗೆದು ಬಗೆದು ನೋಡಿಕೊಂಡ. ಒಂದಲ್ಲ, ಎರಡಲ್ಲ, ಹತ್ತಾರು ಕೂದಲು ಬೆಳ್ಳಗಾಗಿವೆ! ಬಾಲನರೆ ಎನ್ನುವಹಾಗಿಲ್ಲ. ತನಗೆ ಈಗ ಮೂವತ್ತೈದರ ಮೇಲಾಗಿದೆ. ಹೆಚ್ಚೆಂದರೆ ಅರವತ್ತು ವರುಷ ಬದುಕಬಹುದು ತಾನು. ತನ್ನ ಅರ್ಧ ಆಯುಸ್ಸು ಮೀರಿದೆ. ಮುಪ್ಪು ತನ್ನ ಮೇಲೆ ದಾಳಿಯಿಡತೊಡಗಿದೆ ಆಗಲೆ. ತನ್ನಂತೆ ತನ್ನ ಮುದ್ದು ಮೀನಾ ಕೂಡ ಮುಪ್ಪಿನ ಮೊದಲ ಸೋಂಕಿಗೆ ಸಿಲುಕಿದ್ದಾಳೆಯೋ? ಇರಲಾರದು. ಅವಳು ತನಗಿಂತ ನಾಲ್ಕೈದು ವರ್ಷ ಕಿರಿಯಳು. ಆದರೂ, ಅವಳ ಚೆಲುವು ಮಾಸಿಲ್ಲ ಎನ್ನುವಹಾಗಿಲ್ಲ. ಶಂಕರ ಹಾಗೆಯೇ ಕನ್ನಡಿಯ ಪಕ್ಕದಲ್ಲೇ ನೇಲ ಹಾಕಿದ್ದ ತನ್ನ ಮತ್ತು ಮೀನಾಕ್ಷಿಯ ಫೋಟೋ ಚಿತ್ರ ನೋಡಿದ. ಆ ನಿರ್ಜೀವ ಫೋಟೋ ಚಿತ್ರದಲ್ಲಿ ಕೂಡ ಮೀನಾಕ್ಷಿಯ ಮುಖದಲ್ಲಿ ತುಂಬು ಯೌವನದ ತನಿರಸ ತೊಟ್ಟಿಕ್ಕುವಂತೆ ಕಾಣುತ್ತದೆ; ಕೆನ್ನೆಗಳು ತುಂಬಿಕೊಂಡಿವೆ; ಎದೆಯ ಮಾಟ ಮೋಹಗೊಳಿಸುವಂತಿದೆ; ತೋಳುಗಳು ದುಂಡಾಗಿ ಬಾಳೆಯ ದಿಂಡಿನಂತಿವೆ. . ಅದೇ ಮೀನಾಕ್ಷಿ ಈಗ ಹೇಗಿದ್ದಾಳೆ? ಮುಖ ಸೊರಗಿದೆ; ಕಣ್ಣುಗಳು ಕುಳಿಬಿದ್ದಿವೆ; ಕೆನ್ನೆಗಳಲ್ಲಿ ಆ ಕೆಂಪಿಲ್ಲ, ಸೊಂಪಿಲ್ಲ, ಈಗ;

ಮುಖವೆಲ್ಲಾ ಬಿಳಿಚಿಕೊಂಡಿದೆ. ಪದ್ಮ ಆದಮೇಲೆ ಎರಡು ಹೆಣ್ಣು ಮಕ್ಕಳು ಸತ್ತು ಹೋಗಿದ್ದು ತನಗಿಂತ ಅವಳಿಗೆ ಹೆಚ್ಚು ವ್ಯಥೆಯುಂಟುಮಾಡಿದೆ. ಆದರೆ, ಬಹುಕಾಲ ಬಯಸಿದ ಮೇಲೆ ಗಂಡೊಂದು ಆಗಿ ಆ ಕೊರಗನ್ನು ಮರಸಿದೆ. ಆದರೂ, ಮಾಸಿದ ಚೆಲುವು ಮತ್ತೆ ಮೂಡಿಲ್ಲ. ಅವಳ ಚೆಲುವು ಕುಗ್ಗಿತೆಂದು ಅವಳ ಮೇಲಿನ ತನ್ನ ಪ್ರೇಮವೇನೂ ಕುಗ್ಗಿಲ್ಲ, ಹೆಚ್ಚಾಗಿಯೇ ಇದೆ. ಆದರೂ ಕನ್ನಡಿಯಲ್ಲಿ ಕಂಡ ತನ್ನ ನರೆಗೂದಲಿನ ನೋಟ ಈವರೆಗೂ ಶಾಂತವಾಗಿದ್ದ ತನ್ನ ಒಗೆಗಡಲನ್ನು ಒಂದು ಕ್ಷಣದಲ್ಲಿ ಕದಡಿಬಿಟ್ಟಿದೆ.

ಅದು ಯಾವುದು, ಕನ್ನಡಿಯಲ್ಲಿ ತನ್ನ ಪ್ರತಿಬಿಂಬದೊಡನೆ ಕಾಣುತ್ತಿದೆ ಮತ್ತೊಂದು ಬಿಂಬ? ಯಾರ ಪ್ರತಿಬಿಂಬವದು? ಕೋಣೆಯಲ್ಲಿ ಯಾರೂ ಇಲ್ಲ. ಖಂಡಿತವಾಗಿಯೂ ಯಾರೂ ಇಲ್ಲ. ಹಾಗಾದರೆ ಯಾರ ಪ್ರತಿಬಿಂಬ?

ಮೂಲವ್ಯಕ್ತಿಯಿಲ್ಲದೆ ಪ್ರತಿಬಿಂಬವೆಲ್ಲಿ ಬಂತು?

ಶಂಕರ ತಲೆಯಲ್ಲಾಡಿಸಿದ; ಅವನ ಪ್ರತಿಬಿಂಬವೂ ತಲೆಯಲ್ಲಾಡಿಸಿತು. ಶಂಕರ ದುರುದುರನೆ ಕಣ್ಣುಬಿಟ್ಟು ನೋಡಿದ; ಅದೂ ಹಾಗೆಯೇ ನೋಡಿತು. ಶಂಕರ ತನ್ನ ಪ್ರತಿಬಿಂಬದ ಕಡೆಗೆ ಸೊಟ್ಟಮೋರೆಮಾಡಿ ಅಣಕಿಸಿದ; ಅದೂ ತನ್ನ ಕಡೆಗೆ ಸೊಟ್ಟಮೋರೆಮಾಡಿ ಅಣಕಿಸಿತು. ಆದರೆ, ತನ್ನ ಪ್ರತಿಬಿಂಬದೊಡನೆ ಕಂಡ ಆ ಮತ್ತೊಂದು ಬಿಂಬ ತಲೆಯಲ್ಲಾಡಿಸಲಿಲ್ಲ, ದುರುದುರನೆ ಕಣ್ಣುಬಿಟ್ಟು ನೋಡಲಿಲ್ಲ, ತನ್ನ ಕಡೆಗೆ ಸೊಟ್ಟ ಮೋರೆ ಮಾಡಲಿಲ್ಲ; ತುಟಿಪಿಟಕ್ಕೆನ್ನದೆ ನಿಶ್ಚಲವಾಗಿ, ನೀರವವಾಗಿ, ಗಂಭೀರ ಮುದ್ರೆಯಿಂದ ತನ್ನ ಕಡೆಗೆ ನೋಡುತ್ತಿತ್ತು.

ದೃಢಮಾಡಿಕೊಳ್ಳುವುದಕ್ಕಾಗಿ ಶಂಕರ ಸುತ್ತಲೂ ತಿರುಗಿ ನೋಡಿದ; ಕೋಣೆಯಲ್ಲಿ ತಾನು ಹೊರತಾಗಿ ಯಾವ ನರಪಿಳ್ಳೆಯೂ ಇರಲಿಲ್ಲ. ಶಂಕರ ಬೆಕ್ಕಸಬೆರಗಾಗಿ ಬಾಯಿಬಿಟ್ಟ; ಕನ್ನಡಿ ಮಾಯಾದರ್ಪಣವಿರಬಹುದೇ ಎಂದು ದಿಗಿಲುಗೊಂಡ.

"ಬೆಂಗಾಗಬೇಡ; ಭಯಪಡಬೇಡ. ನಾನೂ ನಿನ್ನ ಪ್ರತಿಬಿಂಬವೇ" ಎಂದಿತು ಆ ಇನ್ನೊಂದು ನೆರಳು ರೂಪು.

"ನನ್ನ ಪ್ರತಿಬಿಂಬವೇ!!"

"ಹೌದು ; ನಿನ್ನದೇ".

"ತಲೆ ಪಟ್ಟೆಹಿಡಿದು, ಉಳಿದಿರುವ ಕೂದಲೂ ಪೂರ್ತಿ ನರೆತು ಹೋಗಿದೆಯಲ್ಲಾ ?"

"ಹೌದು".

"ಕೆನ್ನೆಗಳು ಸುಕ್ಕುಬಿದ್ದಿವೆ !"

"ಹೌದು"

"ಹಲ್ಲುಗಳೆಲ್ಲಾ ಉದಿರಿಹೋಗಿವೆ".

"ಹೌದು"

"ಹಾಗಾದರೆ ನನ್ನ ಪ್ರತಿಬಿಂಬ ಹೇಗಾದೀತು ? ನನ್ನ ಪ್ರತಿಬಿಂಬ ನನ್ನ ಎದುರಿಗೆ ಚೆನ್ನಾಗಿ ಕಾಣುತ್ತಿದೆ. ಆದರೆ ಮುಖ ಗೆಲುವಾಗಿದೆ. ಎಂಟು ಹತ್ತು ನರೆಕೂದಲು ಕಂಡರೇನು ? ಮುಖದಲ್ಲಿ ಮುದಿತನದ ಲಕ್ಷಣ ಸ್ವಲ್ಪವೂ ಇಲ್ಲ ?"

"ಹಾಗಿದ್ದ ಮೇಲೆ, 'ಥೂ, ಹಾಳು ಕನ್ನಡಿ' ಎಂದು ಕನ್ನಡಿಯನ್ನು ಬೈದದ್ದೇಕೆ ? ಆ ಕನ್ನಡಿ ಮಾಡಿದ ಅಪರಾಧವೇನು ? ಅದು ಯಥಾರ್ಥ ದರ್ಶಿನಿ. ಅದು ವರ್ತಮಾನವನ್ನು ಮಾತ್ರ ಪ್ರತಿಬಿಂಬಿಸಬಲ್ಲದು. ಭೂತ ವನ್ನಾಗಲಿ ಭವಿಷ್ಯತ್ತನ್ನಾಗಲಿ ಪ್ರತಿಬಿಂಬಿಸಲಾರದು.

"ಹಾಗಾದರೆ ಭೂತವನ್ನೂ ಭವಿಷ್ಯತ್ತನ್ನೂ ಪ್ರತಿಬಿಂಬಿಸುವ ಕನ್ನಡಿಯೂ ಉಂಟೆ ?"

"ಉಂಟು".

"ಯಾವುದದು ?"

"ಕಣ್ಣು ಮುಚ್ಚಿಕೋ ! ತಿಳಿಯುತ್ತದೆ".

ಶಂಕರ ಕಣ್ಣು ಮುಚ್ಚಿಕೊಂಡ. ಕನ್ನಡಿಯಲ್ಲಿ ಕಾಣುತ್ತಿದ್ದ ಪ್ರತಿಬಿಂಬ ಮರೆಯಾಯಿತು; ತನ್ನ ಮುದಿತನದ ಪ್ರತಿಬಿಂಬ ಮಾತ್ರ ಹೆಚ್ಚು ಸ್ಪಷ್ಟವಾಗಿ ಕಾಣತೊಡಗಿತು. ಅದು ಮತ್ತೆ ನುಡಿಯಿತು:

"ಆ ಕನ್ನಡಿ ಯಾವುದು, ತಿಳಿಯಿತೆ ?"

"ತಿಳಿಯಿತು."

"ಯಾವುದು ?"

"ಬಗೆಗನ್ನಡಿ."

"ಅಂಗಡಿಯಲ್ಲಿ ದೊರೆಯುವ ಗಾಜಿನ ಕನ್ನಡಿ ತೋರುವುದೆಲ್ಲ ಮಿಥ್ಯ, ಮಾಯೆ. ಬಗೆಗನ್ನಡಿ ತೋರುವುದು ಸತ್ಯ".

"ಆ ಕನ್ನಡಿ ಯಥಾರ್ಥದರ್ಶಿನಿ ಎಂದೆಯಲ್ಲವೆ?"

"ಹೌದು! ಮಿಥ್ಯಾ ಸ್ವರೂಪವನ್ನು ಅದು ಇದ್ದುದಿದ್ದಂತೆಯೇ ಯಥಾರ್ಥವಾಗಿ ತೋರಿಸುತ್ತದೆ. ಆದರೊಳಗಣ ಸತ್ಯಸ್ವರೂಪ ಕಾಣುವುದು ಬಗೆಗನ್ನಡಿಯಲ್ಲಿ–ತತ್ತ್ವ ಚಿಂತನೆಯ ಫಲವಾಗಿ".

"ಸತ್ಯ ಯಾವುದು?"

"ಈ ದೇಹ ಸ್ಥಿರವಲ್ಲ ಎಂಬುದು".

ಶಂಕರ ಕಣ್ಣುಬಿಟ್ಟ. ತನ್ನ ಯಥಾರ್ಥ ಪ್ರತಿಬಿಂಬವೊಂದೇ ಕಾಣುತ್ತಿತ್ತು; ಆ ಇನ್ನೊಂದು ಬಿಂಬ ಕಣ್ಮರೆಯಾಗಿತ್ತು.

ಈ ದೇಹ ಸ್ಥಿರವಲ್ಲ, ಅದರ ರೂಪು ಸ್ಥಿರವಲ್ಲ, ಬಾಳು ಶಾಶ್ವತವಲ್ಲ, ಮುಪ್ಪು ಅನಿವಾರ್ಯ, ಸಾವು ಸಿದ್ಧ–ಎಂಬ ಚಿರಂತನ-ನೂತನ ಸತ್ಯದ ಅರಿವು ಅವನಿಗೆ ಮೊದಲ ಬಾರಿ ಆಯಿತು. ಕೂಡಲೆ, ಅವನ ಹೃದಯ ಜುಗುಪ್ಸೆ ಜಿಹಾಸೆಗಳಿಗೆ ಎಡೆಗೊಟ್ಟಿತು; ಮುಖ ಬಾಡಿತು, ಕೆಳಬಾಗಿತು; ಬಾಗಿದ ತಲೆಗೆ ಕೈಗಳ ಊರೆಕೊಟ್ಟ.

"ಯಾಕೆ ಅಂದ್ರೇ, ತಲೆನೋವೆ?"

ಶಂಕರ ಮಾತಾಡಲಿಲ್ಲ.

ಮೀನಾಕ್ಷಿ ತಾನು ತಂದಿದ್ದ ಕಾಫಿ ಬಟ್ಟಲನ್ನು ಮೇಜಿನ ಮೇಲಿಟ್ಟು ಪತಿಯ ಭುಜದ ಮೇಲೆ ಕೈಯಿಟ್ಟು, ತಲೆಬಾಗಿ ಮತ್ತೆ ಮೆಲ್ಲನೆ ಕೇಳಿದಳು: ಶಂಕರ ಧ್ಯಾನನಿದ್ರೆಯಿಂದ ಎಚ್ಚತ್ತು, ಕಣ್ಣುಬಿಟ್ಟ. ಮತ್ತೆ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ; ಪಕ್ಕದಲ್ಲಿ, ತನ್ನ ಹೆಂಡತಿಯದು.

"ಮೀನಾ?"

"ಏನು ಅಂದರೆ?"

"ಕನ್ನಡಿಯಲ್ಲಿ ನೋಡಿದೆಯಾ? ನಮ್ಮಿಬ್ಬರ ರೂಪಗಳನ್ನ?"

"ನೋಡಿದೆ; ಆಗಾಗ್ಗೆ ನೋಡಿಕೊಳ್ಳುತ್ತಲೇ ಇದ್ದೇವೆ".

"ನನ್ನ ತಲೆ ನೋಡಿದೆಯಾ?"

"ನೋಡಿದೆ. ಏನೇನೋ ವಿಚಿತ್ರ ಪ್ರಶ್ನೆಗಳನ್ನು ಕೇಳುತ್ತಾ ಇದ್ದೀರಲ್ಲ ಅಂದ್ರೆ? ನಿಮಗೇನು ಹುಚ್ಚುಗಿಚ್ಚು ಹೇಗೆ? ಏನಾಗಿದೆ ನಿಮ್ಮ ತಲೆ? ಏನಾದರೂ ಆಗಿದ್ದರೆ, ನಿಮ್ಮ ತಲೆ ಕೆಟ್ಟಿರಬೇಕು ಅಷ್ಟೆ" ಎಂದು ನಕ್ಕಳು ಮೀನಾಕ್ಷಿ.

"ನನ್ನ ತಲೆ ಸರಿಯಾಗಿಯೇ ಇದೆ. ತಲೆಯಲ್ಲಿ ಮುಪ್ಪಿನ ಮುಂಗುರುಹಾದ ನರೆಗೂದಲು ನೋಡಿದೆಯಾ ಎಂದೆ."

"ಎಂದೋ ನೋಡಿದ್ದೆ; ನಿಮಗೆ ಹೇಳಿಯೂ ಇದ್ದೆ. ನೀವು 'ಎಲ್ಲಿ?' ಎಂದು ನನ್ನ ಮೇಲೆ ರೇಗಿಯೂ ಇದ್ದಿರಿ. ಈಪೊತ್ತು ಕನ್ನಡಿ ಅದನ್ನು ತೋರಿಸಿಕೊಟ್ಟಿದೆ. ಕನ್ನಡಿಯ ಮೇಲೆ ರೇಗುವುದಕ್ಕಾಗುತ್ತದೆಯೇ?— ನೋಡಿದಿರಾ, ನಾನು ಹೇಳಿದೆ ಅಂತ ಕನ್ನಡಿಯ ಮೇಲೆ ರೇಗುವುದಕ್ಕೆ ಹೋಗುತ್ತೀರಲ್ಲ........ಮುದುಕನಾದೆ ಅಂತ ಕನ್ನಡಿಯ ಮೇಲೆ ಸಿಟ್ಟುಮಾಡಿಕೊಂಡು ಅದನ್ನು ಒಡೆದುಗಿಡೆದು ಹಾಕೀರ ಸದ್ಯ. ಈಗಿನ ಕಾಲದಲ್ಲಿ ಒಂದಕ್ಕೆರಡು ಬೆಲೆ ಕೊಟ್ಟರೂ ಅಂಥ ಕನ್ನಡಿ ಸಿಕ್ಕುವುದಿಲ್ಲ"

"ನನ್ನ ವಿಚಾರ ಹೋಗಲಿ; ನಿನ್ನ ಮುಖ ನೋಡಿಕೊಂಡೆಯೋನೇ?"

"ದಿನಾಗಲೂ ನೋಡಿಕೊಳ್ಳುತ್ತಿದ್ದೇನೆ. ನನ್ನ ತಲೆಯೇನೂ ಇನ್ನೂ ನರೆತಿಲ್ಲ—ಅಥವಾ ನಿಮ್ಮದರ ಹಾಗೆ ಇನ್ನೂ ಕೆಟ್ಟಿಲ್ಲ" ಎಂದು ಮತ್ತೆ ನಕ್ಕಳು.

"ಅದು ಸರಿಯೆ. ನಾನು ಹೇಳಿದ್ದು, ನಿನ್ನ ಮುಖ, ತಲೆ ಅಲ್ಲ. ಕೆನ್ನೆಯೆಲ್ಲಾ ಹೇಗೆ ಸುಕ್ಕು ಬಿದ್ದಿದೆ, ನೋಡಿಕೊ. ನೀನು ಮುದುಕಿಯಾಗುತ್ತಿದ್ದೀ ಕಣೇ".

"ಅಲ್ಲ ಅಂದ್ರೆ, ನಾಚಿಕೆಗೇಡೆ ಸರಿ. ವಯಸ್ಸಾಗುತ್ತಾ ಆಗುತ್ತ ಮುದುಕರಾಗದೆ ಹುಡುಗರಾಗುತ್ತೇವೆಯೆ? ಅದಕ್ಕೆ ಹೀಗೆ ತಲೆಗೆ ಕೈಕೊಟ್ಟು ಯೋಚನೆಮಾಡುವುದೆ? ನಾನು ಏನೋ ಅಂತಿದ್ದೆ. ಮುದುಕರಾಗೋರೆಲ್ಲಾ ನಿಮ್ಮ ಹಾಗೆ ಯೋಚನೆ ಮಾಡುತ್ತ ಕುಳಿತುಬಿಟ್ಟರೆ, ಬಾವಿಗೆ ಬಿದ್ದು ಪ್ರಾಣ ಕಳೆದುಕೊಂಡಾರು! ಮುದುಕರಾಗುತ್ತಾ ಆಗುತ್ತಾ ರೂಪಿನ ಮೇಲೆ ಅಭಿಮಾನ ಹೋಗುತ್ತೆ, ಪ್ರಾಣದ ಮೇಲೆ ಆಸೆ ಹೆಚ್ಚುತ್ತೆ ಅಂದ್ರೆ. ಒಂದು ವೇಳೆ

ರೂಪಿನ ಮೇಲೆ ಅಭಿಮಾನ ಹೋಗದೆ ಹೋದರೂ, ಮುದಿರೂಪು ಕೂಡ ಚೆನ್ನು ಅಂತಲೇ ಅನ್ನಿಸುತ್ತದೆ."

"ಇಲ್ಲ, ಮೀನಾ. ನಮ್ಮ ರೂಪುಗಳು ಇನ್ನೂ ಚೆನ್ನಾಗಿವೆ ಎಂದು ನನಗನ್ನಿಸುವುದಿಲ್ಲ. ನಮಗೆ ನಾವೇ ಏಕೆ ಮೋಸಮಾಡಿಕೊಳ್ಳಬೇಕು? ನಮ್ಮ ರೂಪು ಇನ್ನು ವಿಕಾರವೇ ; ಅದು ನಷ್ಟವಾಯಿತು, ಇನ್ನು ಹಿಂದಿರುಗಿ ಬರಲಾರದು. ನೀನು ಹುಡುಗಿ ಎಂದು ತಿಳಿದುಕೊಂಡಿದ್ದರೆ ಅದು ಬರಿಯ ಭ್ರಾಂತಿ".

"ಹಾಗಾದರೆ....ಇನ್ನು ಮೇಲೆ....ನನ್ನನ್ನು ನೀವು...." ಎಂದು ಮೀನಾಕ್ಷಿ ಹುಸಿಕೋಪ ನಟಿಸುತ್ತಾ ಪತಿಯ ಕಡೆಗೆ ಪ್ರಶ್ನೆಯ ನೋಟ ಬೀರಿದಳು.

ಶಂಕರ ತನ್ನ ಚಿಂತೆ, ವೈರಾಗ್ಯಭಾವ, ಎಲ್ಲವನ್ನೂ ಒಂದು ಕ್ಷಣದಲ್ಲಿ ದೂರೀಕರಿಸಿ ತನ್ನ ಪ್ರಿಯ ಪತ್ನಿಯ ಕೈಹಿಡಿದು ಅರ್ಧಪೀಠವಿತ್ತು ಅವಳನ್ನು ಪಕ್ಕದಲ್ಲಿ ಕೂಡಿಸಿಕೊಂಡ. ಕೆಲಹೊತ್ತು ಇಬ್ಬರೂ ಪ್ರೇಮಸಮಾಧಿಯಲ್ಲಿ ಮುಳುಗಿ ಮೌನವಾಗಿದ್ದರು. ಆ ವೇಳೆಯಲ್ಲಿ ಕನ್ನಡಿ ಪ್ರತಿಬಿಂಬಿಸಿದ್ದೇನೆಂಬುದನ್ನು ಬಿಡಿಸಿ ಹೇಳಬೇಕೆ?

ಆದರೆ ಅಲ್ಲಿಂದ ಮುಂದೆ ಕನ್ನಡಿಯಲ್ಲಿ ಪ್ರತಿಬಿಂಬಿತವಾದುದನ್ನು ಬಿಡಿಸಿಯೆ ಹೇಳಬೇಕು. ಕಣ್ಣುಮುಚ್ಚಿ ಪ್ರೇಮಾನಂದವನ್ನು ಸವಿಯುತ್ತಿದ್ದ ಗಂಡ ಹೆಂಡಿರಿಬ್ಬರೂ ಕಣ್ಣುಬಿಟ್ಟಾಗ ತಮ್ಮ ಪ್ರತಿಬಿಂಬಗಳೊಡನೆ ಇನ್ನೊಂದು ಪ್ರತಿಬಿಂಬವಿದ್ದುದನ್ನು ಕಂಡು ಹೆಚ್ಚಿನ ಆನಂದವನ್ನು ಹೊಂದಿದರು ; ಒಂದೇ ಕ್ಷಣದಲ್ಲಿ ತಮ್ಮ ಪ್ರತಿಬಿಂಬಗಳ ಇರವನ್ನೆ ಮರೆತು, ಹಿಂದಿರುಗದೆ, ಕಂಡ ಪ್ರತಿಬಿಂಬದೊಡನೆಯೇ ಮಾತಾಡತೊಡಗಿದರು :

"ಪದ್ಮಾ, ಎಲ್ಲಿಗೆ ಹೋಗಿದ್ದೆಯಮ್ಮಾ" ಎಂದು ಶಂಕರ ಮೃದು ದನಿಯಲ್ಲಿ ಕೇಳಿದ.

"ಪಕ್ಕದ ಮನೆ ಲಲಿತೆ ಸಂಗೀತ ಹೇಳಿಸಿಕೊಳ್ಳುತ್ತಿದ್ದಳು. ಕೇಳುತ್ತಾ ಕೂತಿದ್ದೆ."

"ಅಂದಹಾಗೆ, ಪದ್ಮಾಗೂ ಸಂಗೀತಪಾಠ ಹೇಳಿಸಬೇಕು ಅಂದ್ರೆ ಈಗಿನಿಂದಲೇ. ಮದುವೆಹೊತ್ತಿಗೆ ಚೆನ್ನಾಗಿ ಹಾಡೋದಕ್ಕೆ ಬಂದಿರಬೇಕೋ ಬೇಡವೋ ?" ಎಂದು ಸೂಚಿಸಿದಳು ಮೀನಾಕ್ಷಿ.

"ಅಣ್ಣಾ, ಅಣ್ಣಾ, ಹಾಗೆ ಮಾಡಣ್ಣ, ವೀಣೇನೆ ಹೇಳಿಸಿಬಿಡು" ಎಂದು ಹಿಗ್ಗುತ್ತಾ, ಕೈ ಕೈ ತಟ್ಟುತ್ತ ಕೇಳಿದಳು ಎಂಟು ವರ್ಷ ತುಂಬಿ ಕನ್ಯಾಪದವಿಗೆ ಕಾಲಿಟ್ಟಿದ್ದ ಪದ್ಮ.

"ಲಲಿತೆ ಕಪ್ಪು; ಅವಳಿಗಾದರೆ ಸಂಗೀತ ಪಾಠ ಬೇಕು. ನಮ್ಮ ಪದ್ಮಾಗೆ–ನಮ್ಮ ಚಿನ್ನದ ಬೊಂಬೆಗೆ— ಸಂಗೀತ ಏಕೆ ?....(ಅಷ್ಟರಲ್ಲಿ ಪದ್ಮಳ ಪದ್ಮಮುಖ ಖಿನ್ನತೆಯಿಂದ ಮುದುಡಿಕೊಳ್ಳುತ್ತಿದ್ದುದನ್ನು ಕಂಡು)....ಬೇಕಾದರೆ ವೀಣೆ ಹೇಳಿಸೋಣ ಅದಕ್ಕೇನಂತೆ. ನಮ್ಮ ಪದ್ಮೂ ರೂಪಿಗೆ ಅದು ಯಾವ ತರುಣ ಮರುಳಾಗುವುದಿಲ್ಲವೋ ನೋಡಿಬಿಡುತ್ತೇನೆ. ನಮ್ಮ ಪದ್ಮೂ ರೂಪ ....ಮೀನಾ, ಮೀನಾ !" ಎಂದು ಶಂಕರ ಇದ್ದಕ್ಕಿದ್ದಂತೆಯೇ ಹರ್ಷೋದ್ರೇಕದಿಂದ ಕೂಗಿಕೊಂಡ.

"ಏನು ಅಂದ್ರೆ ? ಯಾವಾಗಲೂ ಹೀಗೆ ನೀವು; ಏನಾದರೂ ಗಾಬರಿಗೊಳ್ಳುವುದು."

"ನಮ್ಮ ರೂಪು ಹೋಯಿತು, ನಷ್ಟವಾಯಿತು, ಎಂದೆ. ನಷ್ಟವಾಗಿಲ್ಲ, ನಾಶವಾಗಿಲ್ಲ. ಪದ್ಮೂನ ನೋಡು, ನಮ್ಮಿಬ್ಬರ ರೂಪಗಳೂ ಅವಳಲ್ಲಿ ಹೇಗೆ ಬೆರೆತು ಹೊಸದಾಗಿ ಮೆರೆಯುತ್ತಿದೆ ! ನನಗೆ ಈಗ ತೋರುತ್ತಿದೆ: ರೂಪುಳ್ಳ ದೇಹಗಳು ಅಸ್ಥಿರ, ರೂಪೇ ಅಸ್ಥಿರವಲ್ಲ; ಮುಪ್ಪು ಮನುಷ್ಯರಿಗೆ, ಮನುಷ್ಯತ್ವಕ್ಕಲ್ಲ ! ಸಾವು ಜೀವಿಗಳಿಗೆ, ಜೀವಕ್ಕಲ್ಲ" ಎಂದು ಎದ್ದು ಹಿಂದೆ ಹರ್ಷಮೂರ್ತಿಯಾಗಿ ನಿಂತಿದ್ದ ಪದ್ಮಳನ್ನು ಮಗುವಿನಂತೆ ಮುದ್ದಾಡಿ ಕೆಳಕ್ಕಿಳಿಸಿದ.

"ಪದ್ಮ, ಕನ್ನಡಿಯ ಮೇಲಿನ ಕೋಪ ಇಳಿದು ಸಮಾಧಾನಕ್ಕೆ ಬಂತಲ್ಲ, ಅಷ್ಟು ಸಾಕು. ಕನ್ನಡಿ ಉಳಿದುಕೊಂಡಿತು" ಎಂದು ಮೀನಾಕ್ಷಿ ಹಾಸ್ಯಧ್ವನಿಯಲ್ಲಿ ಹೇಳುತ್ತಾ ಪದ್ಮಳನ್ನು ಕೈಹಿಡಿದು ಕರೆದುಕೊಂಡು ಒಳಕ್ಕೆ ಹೋದಳು.

# ಚಿತ್ರಪಟ ತಾರೆ

ಬೊಂಬಾಯಿಗೆ ಬಂದುಹೋಗೆಂದು ಬಹು ದಿನಗಳಿಂದ ಕರೆಯುತ್ತಿದ್ದ ನನ್ನ ಮಿತ್ರ ಪ್ರಭಾಕರ. ಎಲ್‌ಎಲ್. ಬಿ. ಪರೀಕ್ಷೆಗೆ ಓದುವುದಕ್ಕಾಗಿ ಅಲ್ಲಿಗೆ ಹೋದವನು ಅವನು. ಅವನೂ ನನ್ನಂತೆಯೇ ಬಡಕುಟುಂಬದಲ್ಲಿ ಹುಟ್ಟಿದವನು. ನಂಟಸ್ತಿಕೆ ಉಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ತಂದೆ ಇವನ ಅಭಿಪ್ರಾಯವನ್ನು ಕೇಳದೆಯೇ ಇವನ ಸೋದರಮಾವನ ಮಗಳನ್ನು ಮನೆಗೆ ತಂದುಕೊಂಡಿದ್ದರು; ಹೆಣ್ಣುಕೊಟ್ಟ ಸೋದರಮಾವನೂ ಬಡವನೆ. ಹೀಗಾಗಿ, ಇವನ ಬೊಂಬಾಯಿಯಲ್ಲಿನ ವಿದ್ಯಾಭ್ಯಾಸಕ್ಕೆ ಯಾರಿಂದ ಸಹಾಯ ದೊರೆಯಬೇಕು? ನಾನು ಅವನಿಗೆ ಗಿಣಿಗೆ ಹೇಳುವಹಾಗೆ ಹೇಳಿದೆ, ಇಬ್ಬರಿಗೂ ಒಟ್ಟಿಗೆ ಸಾಮಾನ್ಯ ತರಗತಿಯಲ್ಲಿ ಬಿ. ಎ. ಪ್ಯಾಸಾದಾಗ: ನನ್ನ ಹಾಗೆಯೇ ಮಾಹೇಯಾನ ಮೂವತ್ತು ರೂಪಾಯಿನ ಗುಮಾಸ್ತೆ ಕೆಲಸಕ್ಕೆ ಸೇರು ಎಂದು. ಕೇಳಲಿಲ್ಲ ಅವನು. ಬೊಂಬಾಯಿಯಲ್ಲಿಯೇ ಯಾವುದಾದರೂ ಕೆಲಸಮಾಡಿಕೊಂಡು 'ಲಾ' (ನ್ಯಾಯಶಾಸ್ತ್ರ) ಓದುತ್ತೇನೆಂದು ಹಟ ಹಿಡಿದು ಹೊರಟೇ ಹೋದ ಅಲ್ಲಿಗೆ. ಯಾರು ಎಷ್ಟು ಹೇಳಿದರೂ ಕೇಳದೆ ಹೆಂಡತಿಯನ್ನೂ ಜೊತೆಯಲ್ಲೇ ಕರೆದುಕೊಂಡು ಹೋದ ಹಣ ಸಂಪಾದನೆ, ವಿದ್ಯಾವ್ಯಾಸಂಗ, ಸಂಸಾರ ನಿರ್ವಹಣ—ಮೂರನ್ನೂ ಒಟ್ಟಿಗೆ ತೂಗಿಸಿಕೊಂಡು ಹೋಗುವುದು ಅಸಾಧ್ಯವಾಗಿ ಕಂಡುಬಂತು. ಸುಲಭವಾಗಿ ಕೈಬಿಡಬಹುದಾದದ್ದು ವ್ಯಾಸಂಗ: ಅದನ್ನು ಬಿಟ್ಟದ್ದಾಯಿತು; ಬಿಟ್ಟದ್ದು ಬಿಟ್ಟದಾರಿಯೇ ಆಯಿತು. ಕೆಲಸವೇನೋ ನಡೆದುಕೊಂಡು ಬಂತು; ಬಲು ಬೇಗನೆ ೧೫೦ ರೂಪಾಯಿ ಸಂಬಳ ಬರುವಹಾಗಾಯಿತು

ಪ್ರಭಾಕರ ಬೊಂಬಾಯಿಗೆ ಹೋದ ಮೇಲೆ, ಏನು ಕಾರಣದಿಂದಲೋ ಏನೊ, ಇತ್ತ ಕಡೆ ಒಂದು ಸಲವೂ ಬರಲಿಲ್ಲ. ನನಗೆ ಮಾತ್ರ ಪದೇಪದೇ ಬರೆಯುತ್ತಿದ್ದ ಅಲ್ಲಿಗೆ ಹೋಗಬೇಕೆಂದು. ಅವನನ್ನೂ ಅವನ ಹೆಂಡತಿಯನ್ನೂ ನೋಡಿ ಮೂರು ವರ್ಷಗಳ ಮೇಲಾಗಿತ್ತು; ನನಗೂ ಬಹುಕಾಲದಿಂದ ಬೊಂಬಾಯಿಯನ್ನು ನೋಡಬೇಕೆಂಬ ಚಪಲವೂ ಇತ್ತು. ಅಲ್ಲದೆ, ಪ್ರಭಾಕರನಿಗೆ ಎರಡು ವರ್ಷದ ಗಂಡು ಮಗುವಿತ್ತು. ಬಾಲಕೃಷ್ಣನ ಹಾಗಿದೆ

ಎಂದು ಬರೆದಿದ್ದ (ಹೆಸರೂ ಅದೆ); ಮಗುವನ್ನು ನೋಡಬೇಕೆಂಬ ಹಂಬಲವೂ ಒಂದು ಕಡೆ.

ನನಗೆ ಬೊಂಬಾಯಿಗೆ ಹೋಗಲು ಇದ್ದ ತೊಂದರೆ ಒಂದೇ. ಏನೇನೋ ನೆಪ ಬರೆದು ತಪ್ಪಿಸಿಕೊಳ್ಳುತ್ತಿದ್ದೆ. ನನ್ನ ತೊಂದರೆಯ ಸೂಚನೆ ಪ್ರಭಾಕರನಿಗೆ ಹೇಗೆ ತಿಳಿಯಿತೊ ನಾನರಿಯೆ; ಕ್ರಿಸ್‌ಮಸ್ ರಜ ಬರುವ ಹೊತ್ತಿಗೆ ಸರಿಯಾಗಿ ನನ್ನ ಪ್ರಯಾಣದ ವೆಚ್ಚ ಕಳಿಸಿ, ಆಹ್ವಾನ ಕೊಟ್ಟ. ಇನ್ನು ತಪ್ಪಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಅಲ್ಲದೆ, ನೋಡಬೇಕೆಂದಿರುವ ಊರಿಗೆ ದುಡ್ಡುಕೊಟ್ಟು ಕರಸಿಕೊಂಡರೆ ಯಾರು ಬೇಡ ಅನ್ನುತ್ತಾರೆ? ನನ್ನಲ್ಲಿ ಅಂಥ ಅಹಂಕಾರವೇನಿಲ್ಲ.

* * * * *

ಅಂತೂ ಬೊಂಬಾಯಿಗೆ ಹೋಗಿ, ಕ್ರಿಸ್‌ಮಸ್ ರಜದ ಒಂದು ವಾರವೂ ಅಲ್ಲಿ ನನ್ನ ಮಿತ್ರನ ಅತಿಥಿಯಾಗಿದ್ದು ಸುಖವಾಗಿ ಕಾಲ ಕಳೆದೆ. ಗುಮಾಸ್ತೆಗೆ ತಾನು ಗುಮಾಸ್ತೆ ಎಂಬ ಅರಿವು ಯಾವಾಗಲೂ ಹೋಗಿರುವುದಿಲ್ಲ; ತನ್ನ ಕನಸಿನಲ್ಲೂ ಅವನು ಗುಮಾಸ್ತೆಯೇ! ಆದರೆ, ಬೊಂಬಾಯಿಯಲ್ಲಿದ್ದ ಒಂದು ವಾರ ನನ್ನನ್ನು ನಾನೇ ಮರೆತು ರಾಜನಂತಿದ್ದೆ: ಪ್ರಭಾಕರನ ಮೈತ್ರಿಯ ಪ್ರಭಾವದಿಂದ.

ಅಲ್ಲಿ ನಾನು ಪಟ್ಟ ಅನುಭವಗಳು, ಉಂಡ ಸವಿ, ಕಂಡ ನೋಟಗಳು—ಇವೆಲ್ಲ ಸುಖದಾಯಕಗಳಾಗಿದ್ದರೂ, ನನ್ನ ಜೀವನದಲ್ಲಿ ಅಪೂರ್ವಲಭ್ಯವೇ ಆಗಿದ್ದರೂ, ಅವುಗಳಲ್ಲಿ ಹೇಳತಕ್ಕಂಥ ಹೆಚ್ಚಿನ ಮಹತ್ವವಾಗಲಿ ವಿಶೇಷವಾಗಲಿ ಏನಿಲ್ಲ. ನಿಜವಾಗಿಯೂ ವಿಶೇಷ ಸಂಗತಿಯೆಂದರೆ, ನನ್ನ ಮಿತ್ರನ ಆತಿಥ್ಯ. ಅದರ ವರ್ಣನೆ ಅಪ್ರಕೃತ, ಕೇವಲ ವೈಯಕ್ತಿಕ ವಿಷಯ.

ಆದರೂ, ಒಂದು ವಿಶೇಷ ಅನುಭವದ ನೆನಪು ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ನೆಲಸಿದೆ. ಅದರ ಸ್ವಾರಸ್ಯಕ್ಕಾಗಿ ಅದನ್ನು ಇಲ್ಲಿ ಎತ್ತಿ ಹೇಳುತ್ತಿಲ್ಲ; ನಮ್ಮ ಸಮಾಜ ಜೀವನದ ಹಲವಾರು ತೊಡಕುಗಳಲ್ಲಿ ಒಂದು ತೊಡಕಿನ ನೋಟದ ಒಂದು ತುಣುಕು ಅಲ್ಲಿ ಕಾಣಬರುತ್ತದೆ, ಅದಕ್ಕಾಗಿ.

* * * * *

ಬೊಂಬಾಯಿಯಲ್ಲಿ ನಾಲ್ಕೈದು ದಿನ ಇದ್ದು ನೋಡಬೇಕಾದ ಮುಖ್ಯ ನೋಟಗಳನ್ನೆಲ್ಲ ನೋಡಿಯಾದ ಮೇಲೆ, ಇನ್ನೂ ಏನಾದರೂ ನೋಡಬೇಕಾದ್ದು ಉಳಿದಿದೆಯೇ ಎಂದು ಪ್ರಭಾಕರನನ್ನು ಕೇಳಿದೆ. "ನೋಡಿದೆಯಾ, ಮರೆತೇ ಹೋಗಿತ್ತು. ಈ ಊರಿನ ಒಂದು ಸಿನಿಮಾ ಮಂದಿರಕ್ಕಾದರೂ ನಿನ್ನನ್ನು ಕರೆದುಕೊಂಡು ಹೋಗಿಲ್ಲ. ಈವೊತ್ತು ಸಂಜೆ 'ರೀಗಲ್' ಟಾಕೀಸ್; ಬೆಟ್ ಡೇವಿಸ್ (Bette Davies) ಪಿಕ್ಚರ್; ಚೆನ್ನಾಗಿರುತ್ತೆ" ಎಂದ. "ಬೊಂಬಾಯಲ್ಲಿ ಏನಾದರೂ ಬೇರೆ ಚಿತ್ರ ತೋರಿಸುತ್ತಾರೆಯೇ? ಸಿನಿಮಾ ಬೊಂಬಾಯಲ್ಲೂ ಒಂದೇ ಬೆಂಗಳೂರಲ್ಲೂ ಒಂದೆ. ಹಾಗೆ ನೋಡುವುದಕ್ಕೆ ಹೋದರೆ, ಎಷ್ಟೋ ಸಲ ಚಿತ್ರಪಟಗಳು ಮೊದಲು ಬೆಂಗಳೂರಿಗೇ ಬರುತ್ತವೆ" ಎಂದೆ. "ಚಿತ್ರಪಟ ಮುಖ್ಯವಲ್ಲ; ಚಿತ್ರ ಮಂದಿರದೊಳಗಿನ ನೋಟ ಮುಖ್ಯ" ಎಂದು ಅವನ ಉತ್ತರ. "ಈಚೆಗೆ ಬೆಂಗಳೂರಿನಲ್ಲೂ ಭರ್ಜರಿಯಾದ ಚಿತ್ರಮಂದಿರಗಳು ಹುಟ್ಟಿಕೊಂಡಿವೆ; ಹಳೆಯುವನ್ನು ಕೂಡ ಹೊಸದಾಗಿ ಮಾಡಿದ್ದಾರೆ. ಬೊಂಬಾಯಿನ ಹೆಚ್ಚುಗಾರಿಕೆಯೇನೋ ನನಗೆ ತಿಳಿಯದು" ಎಂದು ನನ್ನ ಪ್ರತ್ಯುತ್ತರ.

"ಅಯ್ಯೋ ಗುಗ್ಗೀ! ಚಿತ್ರಮಂದಿರದೊಳಗಿನ ನೋಟ ಎಂದರೆ, ಬೆಂಚು ಕುರ್ಚಿಗಳನ್ನು ನೋಡುವುದೆಂದು ತಿಳಿದೆಯಾ?" ಎಂದು ನಕ್ಕ ಪ್ರಭಾಕರ.

"ಹಾಗಾದರೆ ಸೋಫಾಗಳನ್ನು ನೋಡುವುದೇನು?" ಎಂದು ನಾನು ನಗುತ್ತ ಕೇಳಿದೆ.

"ಸೋಫಾಗಳನ್ನಲ್ಲ ಕಣೋ; ಅವುಗಳ ಮೇಲೆ ಕುಳಿತಿರುವ...." ಎಂದು ಹಲ್ಲುಕಿರಿದ ಪ್ರಭಾಕರ.

"ಅಯ್ಯೊ, ರಾಟರ್! (Rotter: ಅನಿಷ್ಟ ವ್ಯಕ್ತಿ) ನಿನ್ನ ಹೆಂಡತಿಗೆ ಹೇಳಲೋ?" ಎಂದು ಅವನ ಬೆನ್ನ ಮೇಲೆ ಗುದ್ದಿದೆ, ನೋವಾಗದಂತೆ.

"ಇನೊಸೆಂಟ್ ಸಿನ್ಸ್ (Innocent sins: ಕೆಡಕುಮಾಡದ ಅಪರಾಧಗಳು), ಅಷ್ಟೆ" ಎಂದ.

ಪ್ರಭಾಕರನ ನಡತೆಯ ವಿಷಯದಲ್ಲಿ ನನಗೆ ಸಂಪೂರ್ಣ ವಿಶ್ವಾಸವಿತ್ತು. ಆದ್ದರಿಂದ ಅವನ ಹಾಸ್ಯಲಹರಿಗೆ ನಾನು ಅಡ್ಡಬರಲಿಲ್ಲ.

ನಮ್ಮ ಗೊತ್ತುಪಾಡಿನಂತೆ ಸಂಜೆ ಹೊತ್ತಿಗೆ ಮುಂಚೆಯೇ ರೀಗಲ್ ಟಾಕೀಸ್ ಕಡೆಗೆ ಹೊರಟೆವು. ಪ್ರಭಾಕರ ಹೇಳಿದಂತೆ ಅಲ್ಲಿ ಬೆಟ್‌ಡೇವಿಸ್ ಅಭಿನಯಿಸಿದ್ದ ಚಿತ್ರವೇ; ಆದರೆ ಅದನ್ನು ಬೆಂಗಳೂರಿನಲ್ಲಿ ಆ ಮೊದಲೇ ನೋಡಿದ್ದೆ.

"ನೋಡಿದೆಯಾ, ನಾನು ಹೇಳಿದ ಹಾಗೆ ಈ ಚಿತ್ರ ಬೆಂಗಳೂರಿಗೇ ಮೊದಲು ಬಂದಿದೆ" ಎಂದು ಗೆಲವಿನ ದನಿಯಲ್ಲಿ ಹೇಳಿದೆ.

"ಅದಕ್ಕೇನು ? ಇನ್ನೊಂದು ಸಲ ನೋಡಿದರಾಯಿತು."

"ಅದು ಎಷ್ಟೇ ಉತ್ತಮ ಚಿತ್ರವಾದರೂ ಅದನ್ನು ನಾನು ಎರಡನೆಯ ಸಲ ನೋಡುವುದಿಲ್ಲ."

"ಏಕೆ ?"–ಪ್ರಭಾಕರನ ಪ್ರಶ್ನೆ.

"ಬೇರೆಯ ದಿನ ಅದರ ಉತ್ತಮ ಗುಣ ಇನ್ನೂ ಉತ್ತಮವಾಗಲು ಅವಕಾಶವಿಲ್ಲ. ನಾಟಕ, ಸಂಗೀತ ಆದರೆ ಅದರ ಮಾತೇ ಬೇರೆ. ವೀಣೆ ಶೇಷಣ್ಣನವರ ರಾಗ ಕಲ್ಯಾಣಿ. ಅದನ್ನು ಎಷ್ಟು ಸಲ ಕೇಳಿದರೂ ಬೇಸರಾಗುತ್ತಿರಲಿಲ್ಲವಂತೆ ರಸಿಕರಿಗೆ; ಅವರ ನುಡಿಕೆಯಲ್ಲಿ ದಿನ ದಿನಕ್ಕೆ ಅದರ ಕಳೆ ಬದಲಾಗುತ್ತಿತ್ತಂತೆ, ಬೆಳೆಯುತ್ತಿತ್ತಂತೆ."

"ನಾನೇನೋ ಉತ್ತಮ ಚಿತ್ರವನ್ನು ಎರಡು ಮೂರು ಸಲವಾದರೂ ನೋಡುತ್ತೇನೆ. ಉತ್ತಮ ಚಿತ್ರದ ಗುಣ ಬೇರೆಯಾಗದಿದ್ದರೂ, ಅದನ್ನು ನೋಡಲು ಬರುವ ಜನ ಬೇರೆ ಬೇರೆ, ಅಲ್ಲವೆ ?" ಎಂದು ಮತ್ತೆ ತನ್ನ ಹಾಸ್ಯದ ವರಿಸೆ ತೆಗೆದ.

ಕಡೆಗೇನೋ ಪ್ರಭಾಕರ ನನ್ನ ಕೋರಿಕೆಯಂತೆ ಯಾವುದಾದರೂ ಒಂದು ಹಿಂದೀ ಚಿತ್ರಕ್ಕೆ ಕರೆದುಕೊಂಡು ಹೋಗಲು ಒಪ್ಪಿದ. ಯಾವುದೋ ಒಂದು ಚಿತ್ರಮಂದಿರದಲ್ಲಿ (ಅದರ ಹೆಸರು ಮರೆತು ಹೋಗಿದೆ) ಬಹಳ ಉತ್ತಮ ಹಿಂದೀ ಚಿತ್ರವಿದೆಯೆಂದು ಅಲ್ಲಿಗೆ ಕರೆದುಕೊಂಡುಹೋದ. ಅದನ್ನು ಅವನು ಒಂದು ತಿಂಗಳ ಹಿಂದೆಯೆ ನೋಡಿದ್ದನಂತೆ. ಅವನು ಶಿಫಾರಸು ಮಾಡಿದ ಮೇಲೆ ಚಿತ್ರ ಚೆನ್ನಾಗಿಲ್ಲದೆ ಇರುತ್ತದೆಯೆ ? ಚಿತ್ರ ಮಂದಿರದ ಮುಂದೆ ವಿಜೃಂಭಿಸುತ್ತಿದ್ದ ಪ್ರಕಟನೆಗಳಿಂದ ಚಿತ್ರ ನಿಜವಾಗಿಯೂ ಚೆನ್ನಾಗಿರಬೇಕೆಂದು ನನಗೂ ತೋರಿತು. ಅದೇ ಚಿತ್ರವನ್ನು 'ಬರುತ್ತದೆ'

ಎಂದು ಬೆಂಗಳೂರಿನ ಸುಪ್ರಸಿದ್ಧ ಚಿತ್ರಮಂದಿರವೊಂದು ಮೂರು ತಿಂಗಳಿಂದ ಒಂದೇ ಸಮನೆ ಅವಿಚ್ಛಿನ್ನ ಅದ್ಭುತ ಪ್ರಚಾರ ಪ್ರಕಟನೆ ಮಾಡುತ್ತಿತ್ತು. 'The Film World' (ಚಲನಚಿತ್ರ ಪ್ರಪಂಚ) ಎಂಬ ಸುಪ್ರಸಿದ್ಧ ಪತ್ರಿಕೆಯಲ್ಲಿ ಅದರ ಪ್ರಶಂಸೆಯನ್ನೂ ಓದಿದ್ದೆ; ಆ ಪ್ರಶಂಸೆಯಲ್ಲಿ ಚಿತ್ರ ಪಟವನ್ನು ಇನ್ನು ಯಾವುದಕ್ಕಾಗಿ ನೋಡದೆ ಹೋದರೂ ಅದರಲ್ಲಿ ಕಥಾ ನಾಯಕಿಯಾಗಿ ಅಭಿನಯಿಸಿದ್ದ 'ಹೊಸತಾರೆ' 'ಸ್ವರ್ಣಲತೆ'ಯ ರೂಪಿಗಾಗಿ, ಮಧುರ ಗಾನಕ್ಕಾಗಿ, ಚಿತ್ತಾಪಹಾರಿಯಾದ ಅಭಿನಯಕ್ಕಾಗಿ ನೋಡ ಬೇಕೆಂದು ಬರೆದಿತ್ತು. ಆದ್ದರಿಂದ, ಆ ಚಿತ್ರವನ್ನು ನೋಡಬೇಕೆಂಬ ಬಯಕೆ ನನ್ನಲ್ಲಿ ಆಗಲೇ ಮೂಡಿತು.

ನಾವು ಅಲ್ಲಿಗೆ ಹೋಗುವ ಹೊತ್ತಿಗೆ ಸ್ವಲ್ಪ ಹೊತ್ತಾಗಿಹೋಗಿದ್ದುದ ರಿಂದ, ಚಿತ್ರ ಆಗಲೇ ಪ್ರಾರಂಭವಾಗಿಹೋಗಿತ್ತು. ಎಷ್ಟು ಬೇಡವೆಂದರೂ ಕೇಳದೆ ಪ್ರಭಾಕರ 'ಬಾಲ್ಕನಿ' ತರಗತಿಯ ಟಿಕೆಟ್ಟು ತೆಗೆದುಕೊಂಡ.

ಚಿತ್ರದ ಹೆಸರು 'ಪತಿತೆ' ಎಂದು. ಪತಿತೆಯ ಪಾತ್ರ ನಮ್ಮ ಕಣ್ಣು ಮುಂದೆ ಅರಳುತ್ತ ಹೋದಂತೆ, ಸ್ವರ್ಣಲತೆಯ ಅಭಿನಯ ಕೌಶಲ ನನ್ನ ಕಣ್ಣುಗಳನ್ನು ಕವರಿತು.

ಪತಿತೆಯ ಪಾತ್ರ ಒಂದು ಹೊರತು, ಚಿತ್ರದ ಕಥಾವಸ್ತುವಾಗಲಿ ಇನ್ನಿತರ ಅಂಶಗಳಾಗಲಿ ಹೊಗಳಿಸಿಕೊಳ್ಳುವ ಹಾಗಿರಲಿಲ್ಲ. ಸ್ವರ್ಣಲತೆ ಕಣ್ಮರೆಯಾದಾಗ ಮೆಲ್ಲನೆ ಹರಟೆ ಹೊಡೆಯುತ್ತಿದ್ದೆವು.

"ಸ್ವರ್ಣಲತೆ ಇನ್ನೂ ಹುಡುಗಿಯ ಹಾಗೆಯೇ ಕಾಣುತ್ತಾಳೆ. ಆದರೂ ಜೀವನದಲ್ಲಿ ತುಂಬ ದುಃಖಪಟ್ಟಿರಬೇಕು. ಇಲ್ಲದಿದ್ದರೆ ಇಷ್ಟು ಸೂಕ್ಷ್ಮವಾಗಿ, ನಮ್ಮ ಕಣ್ಣಿನಲ್ಲಿ ನೀರುತರುವಂತೆ ಅಭಿನಯಿಸುವ ಸಾಮರ್ಥ್ಯ ಬರಲಾರದು" ಎಂದೆ ನಾನು.

"ಜೀವನದ ಅನುಭವಕ್ಕೂ ಅಭಿನಯಕ್ಕೂ ಏನು ಸಂಬಂಧ? ಸ್ವರ್ಣಲತೆ ನೋಡುವುದಕ್ಕೆ ಹುಡುಗಿಯ ಹಾಗೆ ಕಾಣುತ್ತಾಳೆ. ಅದೆಲ್ಲಾ ವೇಷ ತೊಡಿಸುವವನ ಚಾತುರ್ಯ. ಅವಳಿಗೆ ಮೂವತ್ತಕ್ಕೇನು ಕಡಮೆ ಯಿಲ್ಲ ಈಗ ಎಷ್ಟು ಜನರ ಮನೆ ಹಾಳುಮಾಡಿದ್ದಾಳೆಯೋ ಯಾರಿಗೆ ಗೊತ್ತು!" ಎಂದು ಪ್ರಭಾಕರ ಟೀಕಿಸಿದ.

ನಾವು ಹೀಗೆಯೇ ಸ್ವರ್ಣಲತೆಯ ವಿಚಾರ, ಒಟ್ಟಿನ ಮೇಲೆ ಸಿನಿಮಾ ನಟಿಯರ ಹೊಲಸು ಜೀವನ–ಇವನ್ನು ಕುರಿತು ನಮ್ಮ ಮನಸ್ಸಿಗೆ ಬಂದಂತೆ ಮಾತಾಡಿಕೊಳ್ಳುತ್ತಿದ್ದೆವು. ಪ್ರಭಾಕರ ಚಿತ್ರವನ್ನು ಹಿಂದೊಮ್ಮೆ ನೋಡಿದ್ದ ನಾದ್ದರಿಂದ ಅವನಿಗೆ ಅದರಲ್ಲಿ ಅಷ್ಟು ಆಸಕ್ತಿಯಿರಲಿಲ್ಲ. ನನಗೆ ಸ್ವರ್ಣಲತೆಯ ಅಭಿನಯ ಹೊರತು ಇನ್ನೇನೂ ಬೇಕಿರಲಿಲ್ಲ.

ಸ್ವರ್ಣಲತೆಯ ಅಭಿನಯ ಕಾಣಿಸಿಕೊಂಡಾಗಲೂ ನಾನು ಒಮ್ಮೆ ಮಾತಾಡುತ್ತಿದ್ದೆ.

"ದಯವಿಟ್ಟು ಸುಮ್ಮನಿರುತ್ತೀರ ಸ್ವಲ್ಪ ?" ಎಂದು ಪಕ್ಕದಿಂದ ಕೇಳ ಬಂದಿತು ಒಂದು ಹೆಣ್ಣುದನಿ ಸ್ವರ್ಣಲತೆಯೇ ಮಾತಾಡಿದಂತೆ ತೋರಿತು ನನಗೆ! ನನ್ನ ಸಂದೇಹವನ್ನು, ಅನಿಸಿಕೆಯನ್ನು ಪ್ರಭಾಕರನಿಗೂ ತಿಳಿಸಿದೆ–ಮೆಲ್ಲನೆ. "ನಿನಗೆಲ್ಲೋ ಭ್ರಾಂತಿ. ನಿನಗೆ ಸ್ವರ್ಣಲತೆಯ ಮಾತುಗಾರಿಕೆ, ಹಾಡು ಇದುವರೆಗೆ ಕೇಳಿ ಕೇಳಿ ಹಾಗನಿಸಿರಬೇಕು, ಅಷ್ಟೆ" ಎಂದ.

ಇಬ್ಬರೂ ಮೌನವಾಗಿ ಚಿತ್ರ ನೋಡುತ್ತ ಕುಳಿತೆವು.

'ವಿರಾಮ' ಬಂದಿತು ; ಮುಂದಿರದ ದೀಪಾವಳಿ ಹೊತ್ತಿತು. ನಮ್ಮ ಈ ಕಡೆ ಪಕ್ಕದಲ್ಲಿ ದಂಪತಿಗಳು ಕುಳಿತಿದ್ದಂತೆ ತೋರಿತು; ಮತ್ತೊಂದು ಪಕ್ಕದಲ್ಲಿ ಬಲಗಡೆ ಒಂದೇ ಹೆಣ್ಣುವ್ಯಕ್ತಿ ಕುಳಿತಿದ್ದಂತೆ ಕಂಡಿತು. ಆಗ ಆಕ್ಷೇಪಣೆಯೆತ್ತಿದ ಹೆಣ್ಣುದನಿ ಬಲಗಡೆಯಿಂದಲೇ ಬಂದದ್ದು.

ಆ ವ್ಯಕ್ತಿ ಯಾರೆಂದು ನೋಡೋಣವೆಂದರೆ, ಎದ್ದು ಮುಂಗಡೆಯಿಂದ ಹಾದುಹೋದ ಹೊರತು ಕಾಣುವಂತಿರಲಿಲ್ಲ. ಪಕ್ಕದಲ್ಲಿ ಪೀಠಗಳ ನಡುವೆ, ತೆರೆ ಅಡ್ಡಿಯಾಗಿತ್ತು.

"ಪ್ರಭಾಕರ, ಸ್ವಲ್ಪ ಹೊರಗೆ ಹೋಗಿ ಬರೋಣ, ಬಾ; ಇಲ್ಲಿ ತುಂಬ ಸೆಕೆ" ಎಂದೆ. ಇಬ್ಬರೂ ಎದ್ದು ಆ ವ್ಯಕ್ತಿಯ ಮುಂದುಗಡೆಯಿಂದಲೇ ಹೋದೆವು; ಇಬ್ಬರೂ ಆ ಹೆಂಗಸಿನ ಮುಖ ನೋಡಿಕೊಂಡೇ ಹೋದೆವು. ಆದರೆ ಚಿತ್ರದ ಸ್ವರ್ಣಲತೆಯ ಮುಖವನ್ನೂ ಈ ವ್ಯಕ್ತಿಯ ಮುಖವನ್ನೂ ಪರಸ್ಪರ ಹೋಲಿಸಿ ನೋಡುವಷ್ಟು ದೀರ್ಘಕಾಲ ನಿಂತು ನೋಡಲು ಸಾಧ್ಯ ವಾಗುವಂತಿರಲಿಲ್ಲ; ಅದು ಅಸಭ್ಯತನವೆಂದು ನಮಗೆ ತಿಳಿಯದೆ ಇರಲಿಲ್ಲ.

ತೆರಪಾಗಿದ್ದ ವರಾಂಡಕ್ಕೆ ಹೋದೆವು; ಪ್ರಭಾಕರ ಸಿಗರೇಟು ಹೊತ್ತಿಸಿಕೊಂಡ. ಮಾತಾಡತೊಡಗಿದೆವು.

"ಈ ವ್ಯಕ್ತಿ ಖಂಡಿತ ಸ್ವರ್ಣಲತೆಯಲ್ಲ" ಎಂದ ಪ್ರಭಾಕರ.

"ಅಲ್ಲದೆ ಹೋದರೆ ಹಾಳಾಗಿ ಹೋಗಲಿ, ಅದು ಯಾರಿಗೆ ಬೇಕು ಈಗ? ಅಲ್ಲ, ಬೊಂಬಾಯಿನಲ್ಲಿ ಯಾರಿಗೂ ಕನ್ನಡ ಬರುವುದಿಲ್ಲ ಅಂತ ಕನ್ನಡದಲ್ಲಿ ಮನಸ್ಸಿಗೆ ತೋರಿದಂತೆ ಮಾತಾಡಿಕೊಳ್ಳುತ್ತಿದ್ದರೆ, ಆಕೆ 'ದಯ ವಿಟ್ಟು ಸುಮ್ಮನಿರುತ್ತೀರ?' ಎಂದು ಕನ್ನಡದಲ್ಲೇ ಕೇಳಬೇಕೆ!" ಎಂದು ಆಶ್ಚರ್ಯಪಟ್ಟೆ ನಾನು.

"ಬೊಂಬಾಯಿಗೆ ಬಂದ ಹೊಸದರಲ್ಲಿ ನಾನೂ ಹೀಗೇ ಬೇಸ್ತು ಬೀಳು ತ್ತಿದ್ದೆ ಅನೇಕ ವೇಳೆ. ಇಲ್ಲಿ ಟ್ಯಾಕ್ಸಿ ಡ್ರೈವರುಗಳೆಲ್ಲ ಬಹುಮಟ್ಟಿಗೆ ಕನ್ನಡಿಗರೆ; ಎಲ್ಲ ಮಂಗಳೂರಿನವರು."

"ಈಕೆಯೂ ಮಂಗಳೂರಿನವಳೆ ಇರಬಹುದು."

"ನಿನ್ನ ತರ್ಕ ಒಳ್ಳೆ ಚೆನ್ನಾಗಿದೆ! ತರ್ಕಶಾಸ್ತ್ರವೂ ಒಂದು ವ್ಯಾಸಂಗ ವಿಷಯವಾಗಿತ್ತು ಅಲ್ಲವೆ ನಿನಗೆ?" ಎಂದು ಹಂಗಿಸುವ ದನಿಯಲ್ಲಿ ಹೇಳಿದ. "ತರ್ಕ ತಪ್ಪಾಗುವುದಕ್ಕೆ, ಅವಳೇನು ಟ್ಯಾಕ್ಸಿ ಡ್ರೈವರಲ್ಲವಲ್ಲ" ಎಂದು ಎಂದು ಎದುರುಜವಾಬು ಕೊಟ್ಟೆ. ಪ್ರಭಾಕರ ಸುಮ್ಮನಾದ. ಒಂದು ಸಲ ವಾದರೂ ನಾನು ಮಾತಿನಲ್ಲಿ ಗೆಲ್ಲಬೇಡವೆ?

ನನ್ನ ಊಹೆಯೇನೊ ತಪ್ಪಾಗಿತ್ತು. ಆದರೂ ತಪ್ಪನ್ನು ಒಪ್ಪಿ ಕೊಳ್ಳಲು ಇಷ್ಟವಿಲ್ಲದೆ ಅದನ್ನು ಸಾಧಿಸಬೇಕೆಂದಿರುವಷ್ಟರಲ್ಲೆ "ವಿರಾಮ" ಮುಗಿದ ಗಂಟೆಯ ಸದ್ದಾಯಿತು; ಪ್ರಭಾಕರನ ಸಿಗರೇಟೂ ಮುಗಿಯುತ್ತ ಬಂದಿತ್ತು; ಇಬ್ಬರೂ ಒಳಕ್ಕೆ ಹೋಗಿ ನಮ್ಮ ಪೀಠಗಳಲ್ಲಿ ಕುಳಿತುಕೊಳ್ಳು ವಾಗ ಇನ್ನೂ ದೀಪ ಆರಿರಲಿಲ್ಲ. ನಮ್ಮ ಪಕ್ಕದಲ್ಲಿ ಕುಳಿತಿದ್ದ ಆ ಸ್ತ್ರೀ ವ್ಯಕ್ತಿ ಮಾಯವಾಗಿತ್ತು!

ಚಿತ್ರ ಮತ್ತೆ ನೊದಲಾಯಿತು. ಬಹಳ ಹೊತ್ತಾದರೂ 'ಆಕೆ' ಬಂದಂತೆ ತೋರಲಿಲ್ಲ.

ಚಿತ್ರ ಮುಗಿದ ಕೂಡಲೆ ಮನೆಗೆ ತೆರಳುವ ಆತುರ ಹೆಚ್ಚಾಯಿತು ಪ್ರಭಾಕರನಿಗೆ ಸ್ವರ್ಣಲತೆಯ ವಿಚಾರ ಅವನು ಸಂಪೂರ್ಣವಾಗಿ ಮರೆತಂತೆ

ತೋರುತ್ತಿತ್ತು ಅವನ ಆತುರದ ಓಡಾಟದಿಂದ. ಅವನು ಟ್ಯಾಕ್ಸಿಗಾಗಿ ಹಾಗೆ ಅತ್ತ ಇತ್ತ ಓಡಾಡುತ್ತಿದ್ದ. ನಾನು ಟ್ರಾಮಿನಲ್ಲಿ ಹೋಗೋಣವೆಂದೆ; ತಡವಾಗುತ್ತದೆಯೆಂದ ಅವನು. ಇಬ್ಬರೂ ತುಸಹೊತ್ತು ಚರ್ಚೆ ಮಾಡಿದೆವು. ಆ ವೇಳೆಯಲ್ಲಿ ಇದ್ದ ನಾಲ್ಕಾರು ಟ್ಯಾಕ್ಸಿಗಳನ್ನು ಬೇರೆಯವರು ಬಾಡಿಗೆಗೆ ಗೊತ್ತುಮಾಡಿಕೊಂಡು, ಅವು ಹೊರಟು ಹೋಗಿದ್ದುವು. ಟ್ರಾಮಿಗೇ ಹೋಗುವುದೆಂದು ಚಿತ್ರಮಂದಿರದ ಆವರಣವನ್ನು ಬಿಡುವಷ್ಟರಲ್ಲಿ ಸರಿಯಾಗಿ ಒಂದು ಮೋಟಾರು ಬಂಡಿ ಭರ್ರನೆ ಬಂದು ನಮ್ಮ ಮುಂದೆಯೇ ನಿಂತಿತು.

"ಟ್ಯಾಕ್ಸಿ; ಸಾರ್?"

"ಓ, ಮಂಜುನಾಥ್" ಎಂದು ಧ್ವನಿಯಿಂದಲೇ ಗುರುತು ಹಿಡಿದು, ಪ್ರಭಾಕರ ಕೇಳಿದ: "ನಾವು ಇಲ್ಲಿ ಈ ಹೊತ್ತಿಗೆ ಕಾದಿರುತ್ತೇವೆ ಅಂತ ನಿನ್ನೆಯೇ ಕನಸು ಕಂಡಿದ್ದೆಯೋ ಹೇಗೆ?"

"ವಿಚಾರ ತಿಳಿಯಿತು. ಹತ್ತಿ ಸಾರ್, ಹೊತ್ತಾಯ್ತು, ಹೊರಡೋಣ."

ಟ್ಯಾಕ್ಸಿ ಹತ್ತಿ ಇಬ್ಬರೂ ಕುಳಿತೆವು. ಕುಳಿತು ಒಂದೆರಡು ಮಾತಾಡುವುದಕ್ಕಿಲ್ಲ, ಕಣ್ಣುಮುಚ್ಚಿ ಬಿಡುವುದರಲ್ಲಿ ಕಾರು ಮನೆಯ ಮುಂದೆ ನಿಂತಿತ್ತು.

ಪ್ರಭಾಕರ ಮಂಜುನಾಥನ ಸಾರಥ್ಯಕೌಶಲ್ಯವನ್ನು ಕೊಂಡಾಡುತ್ತಲೇ ಕೆಳಕ್ಕಿಳಿದ; ನಾನೂ ಇಳಿದೆ; ಪ್ರಭಾಕರ ಬೆರಗಾಗಿ ಕೇಳಿದ:

"ಇದೇನು, ಮಾತುಂಗ ಎಲ್ಲಿ, ಸ್ಯಾಂಟಕ್ರುಜ್ ಎಲ್ಲಿ? ನಮ್ಮ ಮನೆ ಮರೆತುಬಿಟ್ಟೆಯೋ ಹೇಗೆ?"

ಟ್ಯಾಕ್ಸಿ ಪ್ರಭಾಕರನ ಮನೆಯ ಮುಂದೆ ಅಂತೂ ನಿಂತಿರಲಿಲ್ಲ. ಇರುಳಿನಲ್ಲಿ ಕೂಡ ಅಷ್ಟು ಗೊತ್ತಾಯಿತು ನನಗೆ. ಆದರೆ ಎಲ್ಲಿ, ಯಾರ ಮನೆಯ ಮುಂದೆ ನಿಂತಿತ್ತೆಂಬುದು ನನಗೆ ತಿಳಿಯಲಿಲ್ಲ. ನನಗೆ ಇನ್ನೂ ಅಷ್ಟರ ಮಟ್ಟಿಗೆ ಬೊಂಬಾಯಿಯ ಸ್ಥಳ ಪರಿಚಯ ಆಗಿರಲಿಲ್ಲ.

ಪ್ರಭಾಕರನಿಗೇ ಆ ವಿಷಯ ಗೊತ್ತಾಗಲಿಲ್ಲವೆಂದಮೇಲೆ ಇನ್ನು ನನಗೆ ಅರಿಯದಿದ್ದುದರಲ್ಲಿ ಆಶ್ಚರ್ಯವೇನಿಲ್ಲ.

"ನಿಮ್ಮ ಮನೆ ಮರೆತೇನೂ ಇಲ್ಲ ಸಾರ್. ನಿಮ್ಮನ್ನ ಇಲ್ಲಿಗೆ ಕರ ಕೊಂಡು ಬರಬೇಕೂ ಅಂತ ಕೋಮಲಾದೇವಿಯವರ ಅಪ್ಪಣೆಯಾಗಿತ್ತು.

ಕರೆದುಕೊಂಡು ಬಂದೆ. ನಿಮಗಾಗಿ ಕಾದಿದ್ದಾರೆ. ದಯಮಾಡಿಸಬೇಕು" ಎಂದು ಡ್ರೈವರ್ ಮಂಜುನಾಥ ಮುಂದೆ ಹೊರಟ.

ಕೋಮಲಾದೇವಿ ಯಾರೋ ಪ್ರಭಾಕರನ ನಂಟರೋ ಪರಿಚಯದವರೋ ಇರಬೇಕೆಂದೆಣಿಸಿ, "ನಾನು ಕಾದಿರುತ್ತೇನೆ ಇಲ್ಲಿ. ನೀನು ಹೋಗಿ ಬಾ" ಎಂದೆ ಅವನಿಗೆ.

"ಕೋಮಲಾದೇವಿ! ಆಕೆ ಯಾರು, ಮಂಜುನಾಥ?" ಎಂಬ ಪ್ರಭಾಕರನ ಪ್ರಶ್ನೆಯಿಂದ ಆಕೆ ಅವನಿಗೂ ಅಪರಿಚಿತೆಯೆಂಬುದು ನನಗೆ ಸ್ಪಷ್ಟವಾಯಿತು; ಆಶ್ಚರ್ಯವಾಯಿತು. ಪ್ರಭಾಕರನಂತೂ ಅಚ್ಚರಿಯ ಬೊಂಬೆಯಾಗಿಯೇ ನಿಂತಿದ್ದ.

ಮಂಜುನಾಥ ಬಹು ದೀನದನಿಯಲ್ಲಿ ಕೇಳಿಕೊಂಡ: "ಕೋಮಲೆ ನನ್ನ ತಂಗಿ ಸಾರ್. ಅವಳು ಹೇಳಿದ ಪ್ರಕಾರ ಕರೆದುಕೊಂಡು ಬಂದಿದ್ದೇನೆ. ನಿಮ್ಮ ಕೂಡ ಮಾತನಾಡಬೇಕಂತೆ."

ಮಂಜುನಾಥನಲ್ಲಿ ತುಂಬ ನಂಬಿಕೆಯಿಟ್ಟಿದ್ದನೆಂದು ಕಾಣುತ್ತೆ ಪ್ರಭಾಕರ; ಮರುಮಾತಿಲ್ಲವೆ ಅವನನ್ನು ಹಿಂಬಾಲಿಸಿದ; ನಾನು ಹೇಳಿದ್ದನ್ನು ಮರೆತು, ನಾನೂ ಹಿಂಬಾಲಿಸಿದೆ.

ಬೊಂಬಾಯಿಯಲ್ಲಿ ನಾನು ಮೊದಲು ಬಾರಿ ಪ್ರವೇಶಮಾಡಿದ ಒಂದುಪ್ಪರಿಗೆಯ ಮನೆಯೆಂದರೆ ಇದೇ; ಮಂಜುನಾಥನನ್ನು ಹಿಂಬಾಲಿಸಿ, ಉಪ್ಪರಿಗೆಯನ್ನು ಹತ್ತಿಹೋದೆವು. ಮೆಟ್ಟಿಲು ಹತ್ತುವಾಗಲೇ ಇಂಪಾದ ಹೆಣ್ಣು ದನಿಯ ಹಾಡು ಅಸ್ಫುಟವಾಗಿ ಕೇಳಬಂತು; ಕೋಮಲಾದೇವಿಯೇ ಹಾಡುತ್ತಿರಬೇಕೆಂದು ಬಗೆದೆ. ಆದರೆ, ಉಪ್ಪರಿಗೆಯ ಮೆಟ್ಟಿಲುಗಳು ಕಳೆಯುತ್ತ ಬಂದಂತೆ, ಧ್ವನಿ ಹಿಂದೆ ಕೇಳಿದ ಯಾವುದೋ ಪರಿಚಯದ ಧ್ವನಿಯಾಗಿ ಕಾಣುತ್ತಬಂತು; ಕ್ಷಣವಾದ ಮೇಲೆ, ಹಾಡಿನ ಮಾತುಗಳು ಕಿವಿಗೆ ಬೀಳ ಹತ್ತಿದ ಕೂಡಲೆ, ನಾವು ಈಗ ತಾನೇ ನೋಡಿಬಂದ ಚಿತ್ರಪಟ ತಾರೆ ಸ್ವರ್ಣಲತೆ ಹಾಡುತ್ತಿರಬೇಕೆಂದು ತೋರಿತು; ಹಾಡು ಕೂಡ ನಾವು 'ಚಿತ್ರಪಟ'ದಲ್ಲಿ ಕೇಳಿದ್ದೇ.

ಬೊಂಬಾಯಿಯಲ್ಲಿ ಕೆಲವು ಕಡೆ ತಿರುಗಾಡುವಾಗ, ಹೊಕ್ಕಾಗ, ಎಚ್ಚರಿಕೆಯಿಂದಿರಬೇಕೆಂದು ನನ್ನ ಮಿತ್ರರಿಂದ ಕೇಳಿದ್ದೆ. ಆ ಎಚ್ಚರಿಕೆ

ತೆಗೆದುಕೊಳ್ಳಲು ಇನ್ನೂ ಕಾಲ ಮಿಾರಿರಲಿಲ್ಲ. ಸಕಾಲದಲ್ಲಿ-ಉಪ್ಪರಿಗೆಯ ಮೇಲಣ ಕೋಣೆಯೊಂದಕ್ಕೆ ಒಯ್ಯುವ ಬಾಗಿಲನ್ನು ಪ್ರವೇಶಿಸುವ ಮುನ್ನ-ಪ್ರಭಾಕರನಿಗೆ ಎಚ್ಚರಿಕೆ ಕೊಟ್ಟೆ ನಾನು.

ಆ ಹೊತ್ತಿಗೆ ಮಂಜುನಾಥ ಕೋಣೆಯ ಒಳಕ್ಕೆ ಹೋಗಿದ್ದ. ನಾನು ಪಿಸುಮಾತಿನಲ್ಲಿ ಪ್ರಭಾಕರನಿಗೆ ಉಸುರಿದೆ:

"ಸ್ವರ್ಣಲತೆ ನಿನಗೆ ಬಲೆ ಒಡ್ಡಿರುವ ಹಾಗೆ ಕಾಣುತ್ತೆ. ಕಾಲಿಗೆ ತೊಡರಿಕೊಳ್ಳುವ ಮೊದಲೇ ಕಂಬಿ ಕೀಳುವುದು ಮೇಲು."

"ಸ್ವರ್ಣಲತೆ! ಇಲ್ಲೆಲ್ಲಿ ಬಂದಾಳು!"

"ಹಾಡು ಕೇಳಲಿಲ್ಲವೆ?"

"ಹ್ಞೂ, ದಿಟ. ಆದರೇನಂತೆ? ನಾನು ಜೊತೆಯಲ್ಲಿರುವಾಗ ನಿನಗೇನೊ ಭಯ?" ಎಂದು ನನ್ನ ಪಕ್ಕೆ ತಿವಿದ ತನ್ನ ಮೊಣಕೈನಿಂದ.

ಮಂಜುನಾಥ ಒಳಗಿನಿಂದ ಬಂದು, "ಸಂಕೋಚ ಯಾಕೆ? ದಯ ಮಾಡಿಸಿ ಒಳಕ್ಕೆ" ಎಂದು, ಒಂದು ಕೈಲಿ ಬಾಗಿಲ ತೆರೆಯನ್ನು ಓರೆಯಾಗಿ ಹಿಡಿದುಕೊಂಡು, ಮತ್ತೊಂದು ಕೈಲಿ ಸ್ವಾಗತ ಸೂಚಿಸಿದ.

ನಾವು ಒಳಕ್ಕೆ ಪ್ರವೇಶಿಸಿದೆವು. ಸ್ವರ್ಣಲತೆಯ ಹಾಡು ಅಲ್ಲಿಯೇ ಕೇಳುತ್ತಿತ್ತು-ಆದರೆ ಸ್ವ ರ್ಣ ಲ ತೆ ಅಲ್ಲಿರಲಿಲ್ಲ! ಅವಳು ಚಿತ್ರಪಟದಲ್ಲಿ ಹಾಡಿದ್ದ ಇಂಪು ಹಾಡುಗಳನ್ನು ಗ್ರಾಮಫೋನ್ ಯಂತ್ರವೊಂದು ಯಥಾ ಶ್ರುತವಾಗಿ ಮರುನುಡಿಯುತ್ತಿತ್ತು!

ಮಂಜುನಾಥ ನಮ್ಮನ್ನು ಒಂದು ಸೋಫಾದ ಮೇಲೆ ಕುಳಿತುಕೊಳ್ಳುವ ಹಾಗೆ ಹೇಳಿ ಪಕ್ಕದ ಕೋಣೆಯೊಂದರೊಳಕ್ಕೆ ಹೋದ.

ನಾವು ಕುಳಿತಿದ್ದ ಕೋಣೆ ಆಡಂಬರವಿಲ್ಲದ ಅಲಂಕಾರಗಳಿಂದ ಕೂಡಿ, ಸೋಫ ಕುರ್ಚಿ ಮೇಜು ಮುಂತಾದ ನವನಾಗರಿಕತೆಯ ಸಲಕರಣೆಗಳಿಂದ ಸುಸಜ್ಜಿತವಾಗಿತ್ತು; ಸುಮನೋಹರವಾಗಿತ್ತು; ಸುವಾಸಿತವಾಗಿತ್ತು. ಸುತ್ತ ಕಣ್ಣುಹರಿಸಿ ಪರಿಶೀಲಿಸುತ್ತಿರುವಷ್ಟರಲ್ಲಿಯೇ, ಮಂಜುನಾಥ ಹೊಕ್ಕ ಕೋಣೆ ಯಿಂದ ಕೋಮಲಾದೇವಿ ನಿಧಾನವಾಗಿ ನಮ್ಮೆಡೆಗೆ ನಡೆದು ಬಂದು, ನಮ್ಮ ಎದುರಿನಲ್ಲಿ ಇದ್ದ ಮೆತ್ತೆ ಕುರ್ಚಿಯ ಮೇಲೆ ಕುಳಿತುಕೊಂಡಳು.

ಸುತ್ತಮುತ್ತ ಹರಿಯುತ್ತಿದ್ದ ನನ್ನ ದೃಷ್ಟಿ ಕ್ಷಣಕಾಲ ಅವಳ ಮುಖ ದಲ್ಲಿ ಕೀಲಿಸಿಹೋಯಿತು. ಕಮಲವನ್ನು ಹೊಕ್ಕು ಅಲ್ಲಿಯೇ ಮೈಮರೆತ ದುಂಬಿಗಳಂತಾದುವು ನನ್ನ ಕಣ್ಣುಗಳು.

ಹೀಗೆ ದಿಟ್ಟಿಸಿ ನೋಡಿದ್ದು ಕ್ಷಣಕಾಲ ಮಾತ್ರ; ಅಷ್ಟು ಮಾತ್ರ ದಿಂದಲೇ, ಎದುರಿಗೆ ಕುಳಿತಿದ್ದ ವ್ಯಕ್ತಿ ಸ್ವರ್ಣಲತೆಯೇ ಎಂದು ನನಗೆ ಖಚಿತ ವಾಯಿತು. ಚಿತ್ರಪಟದಲ್ಲಿ ಕಂಡದ್ದಕ್ಕಿಂತ ಸಹಜ ಸುಂದರವಾಗಿದ್ದಳು. ಆಕೆ ಯಾರೇ ಆಗಿರಲಿ, ಹಾಗೆ ದಿಟ್ಟಿಸಿ ನೋಡುವುದು ಅಸಭ್ಯತನವೆಂದು ನಾನು ತಲೆತಗ್ಗಿಸಿದೆ.

ಇಷ್ಟು ಹೊತ್ತಿಗೆ ಗ್ರಾಮಫೋನ್ ಗಾನ ನಿಂತಿತ್ತು. ಸ್ವಲ್ಪ ಹೊತ್ತು ಮೂವರೂ ಮೌನವಾಗಿ ಕುಳಿತಿದ್ದೆವು ನನಗಂತೂ ಮಾತೆತ್ತಲು ಬಾಯೇ ಇಲ್ಲವೆಂಬಂತಾಗಿತ್ತು.

ಮುಂದುಗಡೆ 'ಟೀಪಾಯ್' ಮೇಲಿದ್ದ ಸಿಗರೇಟು ಡಬ್ಬದಿಂದ ಪ್ರಭಾಕರ ಒಂದು ಸಿಗರೇಟು ತೆಗೆದು ಹೊತ್ತಿಸಿಕೊಂಡು, 'ಧೂಮ ವಿಸರ್ಜನ ಲೀಲೆ'ಯಲ್ಲಿ ಮಗ್ನನಾದ.

"ಮಂಜೂ" ಎಂದು ಕೂಗಿ ಕರೆದಳು ಕೋಮಲಾದೇವಿ–ಮಾತಿನ ದನಿ ಕೂಡ ಮಂಜುಳ

ಮಂಜುನಾಥ ಒಳಗಿನಿಂದ 'ಟೀ, ಬಿಸ್ಕಟ್, ಬಗೆ ಬಗೆಯ ಹಣ್ಣು– ಇವನ್ನು ತೆಗೆದುಕೊಂಡು ಬಂದು ನಮ್ಮ ಮುಂದೆ ಇಟ್ಟು, ಮತ್ತೆ ಒಳಕ್ಕೆ ಹೋದ.

ಕೋಮಲೆ ಎದ್ದು ಬಂದು ನಮ್ಮ ಮುಂದೆ ನಿಂತು, "ದಯವಿಟ್ಟು ಸ್ವೀಕರಿಸಬೇಕು" ಎಂದಳು. "ನೀವು?" ಎಂದ ಪ್ರಭಾಕರ. "ಅಗತ್ಯವಾಗಿ ಆಗಲಿ" ಎಂದು ಕೋಮಲೆ ಬಳಿಯಲ್ಲಿಯೇ ಇದ್ದ ಕುರ್ಚಿಯ ಮೇಲೆ ಕುಳಿತಳು. ಸ್ವಲ್ಪ ಬಿಸ್ಕಟ್, ಹಣ್ಣು ತೆಗೆದುಕೊಂಡಾದ ಮೇಲೆ ಅವಳೇ ಬಟ್ಟಲುಗಳಿಗೆ ಟೀ ಬಗ್ಗಿಸಿದಳು. ಟೀ ಸೇವನೆಯೂ ಮುಗಿಯಿತು. ಕೋಮಲೆ ಸಿಗರೇಟು ಡಬ್ಬವನ್ನು ನಮ್ಮ ಮುಂದೆ ಹಿಡಿದಳು. ಪ್ರಭಾಕರ ತೆಗೆದು ಕೊಂಡ–ಎರಡು ಮೂರು! "ದಯವಿಟ್ಟು ಕ್ಷಮಿಸಬೇಕು" ಎಂದೆ ನಾನು.

ಕಡೆಗೆ ಪ್ರಾರಂಭಮಾಡಿದ ಪ್ರಭಾಕರ:

"ಸ್ವರ್ಣಲತಾ ದೇವಿಯವರೇ, ನಿಮ್ಮ ಆತಿಥ್ಯಕ್ಕಾಗಿ ಅನೇಕ ವಂದನೆಗಳು. ನಮ್ಮನ್ನು ಬರಮಾಡಿಕೊಂಡದ್ದು ಏಕೆ? ನಮ್ಮಿಂದ ಏನಾಗಬೇಕು? ಬೇಗ ತಿಳಿಸಿಬಿಟ್ಟರೆ ಉಪಕಾರವಾಗುತ್ತೆ. ಮನೆಯಲ್ಲಿ ಹೆಂಡತಿ ಕಾದಿರುತ್ತಾಳೆ..............."

"ದಯವಿಟ್ಟು ಕ್ಷಮಿಸಬೇಕು. ನಿಮಗೆ ಈಗಾಗಲೇ ತುಂಬ ತೊಂದರೆ ಕೊಟ್ಟಿದ್ದೇನೆ. ಹೆಚ್ಚು ಹೊತ್ತು ನಿಮ್ಮನ್ನು ಕಾಯಿಸುವುದಿಲ್ಲ. ಮೊದಲನೆಯದಾಗಿ, ನೀವು ಈಗ ಕೋಮಲಾದೇವಿಯ ಹತ್ತಿರ ಮಾತಾಡುತ್ತಿದ್ದೀರಿ ಎಂದು ತಿಳಿಯಬೇಕು; ಸ್ವರ್ಣಲತೆಯಲ್ಲ."

"ಹಾಗಾದರೆ ನೀವು ಸ್ವರ್ಣಲತೆ ಅಲ್ಲವೆ?" ಎಂದು ನಾನೂ ಕೇಳಿಯೇ ಬಿಟ್ಟೆ ಧೈರ್ಯಮಾಡಿ.

"ಅಲ್ಲಿ ಸ್ವರ್ಣಲತೆ. ಇಲ್ಲಿ ಕೋಮಲಾದೇವಿ."

"ಓ, ಹಾಗೋ!" ಎಂದು ಉದ್ಗಾರ ತೆಗೆದೆ.

"ನಾನು ನಿಮ್ಮನ್ನು ಇನ್ನು ಹೆಚ್ಚು ಹೊತ್ತು ಕಾಯಿಸುವುದಿಲ್ಲ. ಒಂದು ನೇರವಾದ ಪ್ರಶ್ನೆ ಕೇಳುತ್ತೇನೆ; ದಿಟ್ಟತನಕ್ಕಾಗಿ ನನ್ನನ್ನು ಕ್ಷಮಿಸಬೇಕು" ಎಂದು ಪ್ರಭಾಕರನ ಕಡೆ ತಿರುಗಿ ಹೇಳಿದಳು.

"ಏನು ಬೇಕಾದರೂ ಕೇಳಬಹುದು" ಎಂದ ಪ್ರಭಾಕರ.

"ನೀವು ಸಿನಿಮಾ ಮಂದಿರದಲ್ಲಿ ಮಾತಿನಲ್ಲಿ ತೋರಿಸಿದ ಕೆಚ್ಚನ್ನು ಕಾರ್ಯದಲ್ಲೂ ತೋರಿಸಬಲ್ಲಿರಾ?"

"ಅಂದರೆ!"

"ಸಿನಿಮಾ ನಟಿಯರ ಜೀವನ ಹೊಲಸಾಗದಂತೆ ನೀವು ನೋಡಿಕೊಳ್ಳದೆ ಅವರು ಕೆಟ್ಟರೆ ಅದರ ಹೊಣೆ ನಿಮ್ಮದೇ ಅಲ್ಲವೆ?"

"ಅದು ಹೇಗಾದೀತು? ಕೆಡಿ ಎಂದು ನಾವು ಹೇಳುತ್ತೇವೆಯೆ?"

"ನಮ್ಮನ್ನು ಕೆಡಿಸಬಯಸುವವರು ಹಲ ಮಂದಿ. ಕೈಹಿಡಿದು ಉದ್ಧಾರ ಮಾಡಲು ಮುಂದೆಬರುವವರನ್ನು ಮಾತ್ರ ಕಾಣೆ"

"ಅದಕ್ಕೆ ನಾವೇನು ಮಾಡೋಣ, ನೀವು ಪ್ರಯತ್ನಪಡಬೇಕು."

"ಹಲವು ಬಾರಿ ಪ್ರಯತ್ನಪಟ್ಟೆ ಅದು ವ್ಯರ್ಥವಾಗಿದೆ. ಈಗಲೂ ಅದೇ ಪ್ರಯತ್ನದಲ್ಲಿದೇನೆ."

"ಆದರೆ ನಮ್ಮಂಥವರನ್ನು ಪ್ರಾರ್ಥಿಸಿಕೊಂಡರೆ ಏನು ಪ್ರಯೋಜನ? ಯಾರಾದರೂ ನಟರನ್ನೇ ಪ್ರಾರ್ಥಿಸಿಕೊಳ್ಳಬೇಕು."

"ನಟಿ ನಟನನ್ನೇ ಮದುವೆಯಾಗಬೇಕೇನು? ಇತರರನ್ನು ಮದುವೆಯಾಗಕೂಡದೆ?"

"ಸಾಮಾನ್ಯವಾಗಿ ನಟನಟಿಯರು ತಮ್ಮ ತಮ್ಮಲ್ಲಿ ಮದುವೆಯಾಗುವುದೇ ಇಲ್ಲಿಯೂ ಪಾಶ್ಚಾತ್ಯ ದೇಶಗಳಲ್ಲೂ ರೂಢಿ; ಅವರದೇ ಒಂದು ಜಾತಿ ಏರ್ಪಟ್ಟಹಾಗಾಗಿದೆ. ಅದಕ್ಕೆ ಹಾಗೆ ಹೇಳಿದೆ."

"ಆದರೆ, ನಟರಲ್ಲಿ ನನಗೆ ನಂಬಿಕೆಯಿಲ್ಲ."

"ನಟಿಯರಲ್ಲಿ ಜನಕ್ಕೆ ನಂಬಿಕೆಯಿಲ್ಲ."

"ಹಾಗಿದ್ದರೆ, ನಟಿಯರು ಕೆಟ್ಟರೆ ಅವರನ್ನು ದೂಷಿಸುವ ಅಧಿಕಾರ ನಿಮಗಿಲ್ಲ."

"ಸಾರ್ವಜನಿಕವಾಗಿ ನಾವು ಅವರನ್ನು ದೂಷಿಸಿಲ್ಲವಲ್ಲ? ನಾನೂ ನನ್ನ ಮಿತ್ರರೂ ನಮ್ಮ ನಮ್ಮಲ್ಲಿ ಮಾತಾಡಿಕೊಂಡೆವು, ಅಷ್ಟೆ."

"ಆದರೆ ನೀವು ಮಾತಾಡಿಕೊಂಡದ್ದು ನನ್ನ ಕಿವಿಗೆ ಬಿತ್ತು ನನಗೆ ವ್ಯಥೆಯಾಯಿತು. ನೀವು ಹೇಳಿದಂತೆ ನಾನು ಯಾರ ಮನೆಯನ್ನೂ ಹಾಳು ಮಾಡಿಲ್ಲ............ಅಯ್ಯೊ, ಯಾರೂ ನನ್ನ ಮಾತು ನಂಬುವುದಿಲ್ಲವಲ್ಲ!" ಎಂದು ಮುಖ ಮುಚ್ಚಿಕೊಂಡಳು. ದುಃಖ ಉಕ್ಕಿಬಂದು, ಕಣ್ಣು ನೀರಿಟ್ಟಿತೆಂದು ಕಾಣುತ್ತದೆ. ಇದ್ದಕ್ಕಿದ್ದ ಹಾಗೆ ಎದ್ದು ಹೊರಟುಹೋದಳು; ಬಿಕ್ಕಿ ಬಿಕ್ಕಿ ಅಳುವ ಸದ್ದು ಕೇಳಬಂತು.

"ಪ್ರಭಾಕರ, ನಿನಗೆ ಎಳ್ಳಷ್ಟೂ ಕನಿಕರವಿಲ್ಲ. ಎಷ್ಟೇ ಆಗಲಿ ಹೆಣ್ಣು. ಸ್ವಲ್ಪ ಸಹಾನುಭೂತಿಯಿಂದ ಮಾತಾಡಬಾರದಾಗಿತ್ತೆ?" ಎಂದೆ ನಾನು.

ಪ್ರಭಾಕರ ಏನೂ ಉತ್ತರ ಕೊಡಲಿಲ್ಲ. ತನ್ನ ಒರಟುತನಕ್ಕಾಗಿ ಮರುಗುತ್ತಿದ್ದನೆಂದು ಕಾಣುತ್ತದೆ.

ಐದು ನಿಮಿಷವಾಯಿತು. ಹತ್ತು ನಿಮಿಷವಾಯಿತು; ಕೋಮಲೆ ಎದ್ದು ಬರಲೇ ಇಲ್ಲ. ಪ್ರಭಾಕರ, "ಮಂಜುನಾಥ್" ಎಂದು ಸ್ವಲ್ಪ ಗಟ್ಟಿಯಾಗಿಯೇ ಕರೆದ. ಮಂಜುನಾಥ ತಾನು ಮೊದಲು ಹೋಗಿದ್ದ ಕೋಣೆಯೊಳಗಿನಿಂದ ಧಾವಿಸಿ ಬಂದ.

"ಏನು ಸಾರ್?"

"ನಿನ್ನ ತಂಗಿ ನಮ್ಮ ಮೇಲೆ ಅಸಮಾಧಾನಪಟ್ಟುಕೊಂಡಿದ್ದಾರೆಂದು ಕಾಣುತ್ತೆ. ನಮ್ಮನ್ನು ಕ್ಷಮಿಸಬೇಕೆಂದು ಕೇಳಿ, ಇನ್ನು ಹೊರಡೋಣವೇ ಕೇಳಿಕೊಂಡು ಬಾರಯ್ಯ" ಎಂದ ಪ್ರಭಾಕರ.

ಮಂಜುನಾಥ ತನ್ನ ತಂಗಿ ಇದ್ದೆಡೆಗೆ ಹೋಗಿ, ಅವಳನ್ನು ಸಮಾಧಾನ ಪಡಿಸಿದನೆಂದು ಕಾಣುತ್ತೆ. ಮಂಜುನಾಥನೊಡನೆ ಅವಳೂ ಬಂದಳು. ನಾವು ಹೊರಡಲು ಸಿದ್ಧರಾಗಿ ಎದ್ದು ನಿಂತೆವು.

"ಕ್ಷಮಿಸಬೇಕಾದವರು ನೀವು, ನಾನಲ್ಲ. ಕರಸಿದವಳು ನಾನು, ವಿಚಾರ ಎತ್ತಿದವಳು ನಾನು. ನಿಮ್ಮ ತಪ್ಪು ಏನೂ ಇಲ್ಲ. ನೀವು ಕೃಪೆಮಾಡಿ ಮತ್ತೊಮ್ಮೆ ಬಂದರೆ ನನಗೆ ತುಂಬ ಸಂತೋಷ" ಎಂದು ನಮ್ಮನ್ನು ಬೀಳ್ಕೊಟ್ಟಳು.

ಮಂಜುನಾಥ ಟ್ಯಾಕ್ಸಿಯಲ್ಲಿ ನಮ್ಮನ್ನು ಕೂರಿಸಿಕೊಂಡು ಪ್ರಭಾಕರನ ಮನೆಗೆ ಬಿಟ್ಟ. ಬಂಡಿಯನ್ನು ನಿಧಾನವಾಗಿಯೇ ಬಿಡುತ್ತಿದ್ದ; ದಾರಿಯಲ್ಲಿ ಅವನು ತನ್ನ ತಂಗಿಯ ವಿಚಾರ ಕೆಲವು ಸಂಗತಿಗಳನ್ನು ಹೇಳಿ ಅವಳ ವಿಷಯದಲ್ಲಿ ನಮಗಿದ್ದ ಸಂಶಯವನ್ನು ನಿವಾರಣೆ ಮಾಡಿದ.

* * * * *

ಶಂಕರರಾಯರು ಮಂಗಳೂರಿನಲ್ಲೇ ಹುಟ್ಟಿದವರು. ಬೆಂಗಳೂರಿನಲ್ಲಿ ವೈದ್ಯರಾಗಿ ನೆಲಸಿದರು. ಅವರ ವೈದ್ಯಕೀಯ ವೃತ್ತಿ ತಕ್ಕಮಟ್ಟಿಗೆ ನಡೆಯು ತ್ತಿತ್ತು. ಅವರಿಗೆ ಕೋಮಲೆ ಒಬ್ಬಳೇ ಮಗಳು. ರೂಪವತಿಯೂ ಆದ ಅವಳನ್ನು ತುಂಬ ವಿದ್ಯಾವತಿಯಾಗಿಯೂ ಮಾಡಬೇಕೆಂಬುದು ಅವರ ಹೆಬ್ಬ ಯಕೆ. ಮಂಗಳೂರಿನ ಪ್ರಾಂತದಲ್ಲಿ ಇವರಿಗೆ ಬೇಕಾದಷ್ಟು ಪಿತ್ರಾರ್ಜಿತ ಹೊಲ ತೋಟಗಳಿದ್ದುವು; ಅವನ್ನೆಲ್ಲ ಇವರ ಅಣ್ಣ ಸುಂದರರಾಯರೇ ನೋಡಿಕೊಳ್ಳು ತ್ತಿದ್ದರು. ಅವರು ಮಕ್ಕಳೊಂದಿಗರೆಂದು ಶಂಕರರಾಯರು ಜಮೀನಿನ ತಮ್ಮಪಾಲಿನ ಉತ್ಪನ್ನವೇನನ್ನೂ ತಾವು ತೆಗೆದುಕೊಳ್ಳುತ್ತಿರಲಿಲ್ಲ.

ಮಂಜುನಾಥ ಶಂಕರರಾಯರ ಹೆಂಡತಿಯ ಅಕ್ಕನ ಮಗ. ಕೋಮಲೆಗೆ ಒಡನಾಡಿಗಳಾರೂ ಇಲ್ಲವೆಂದು ಅವರು ಮಂಜುನಾಥನನ್ನು ಸಣ್ಣವನಾಗಿ ದ್ದಾಗಲೇ ಕರೆದುಕೊಂಡು ಬಂದು, ತಮ್ಮ ಮನೆಯಲ್ಲಿಟ್ಟುಕೊಂಡು, ಸ್ವಂತ

ಮಗನಂತೆಯೇ ಪೋಷಿಸಿಕೊಂಡು ಬಂದರು. ತಮ್ಮ ಮಕ್ಕಳ ಪೈಕಿಯೇ ಒಬ್ಬನನ್ನು ಕರೆದುಕೊಂಡು ಹೋಗಿ ಇಟ್ಟುಕೊಳ್ಳಲಿಲ್ಲವಲ್ಲಾ ಎಂದು ಸುಂದರ ರಾಯರಿಗೂ ಅಸಮಾಧಾನ

ಮೊದಲಿನಿಂದಲೂ ಮಂಜ[illegible] ವಿದ್ಯೆಯಲ್ಲಿ ಆಸಕ್ತಿಯಿರಲಿಲ್ಲ; ಲವರ್ ಸೆಕಂಡರಿ ಪರೀಕ್ಷೆಗೆ ಮೂರುಸಲ ಕಟ್ಟಿ ಫೇಲಾಗಿದ್ದ. ಅಷ್ಟು ಹೊತ್ತಿಗೆ ಕೋಮಲೆ ಎಸ್. ಎಸ್. ಎಲ್. ಸಿ. ಪರೀಕ್ಷೆಯ ತರಗತಿಗೆ ಬಂದುಬಿಟ್ಟಿದ್ದಳು. ಅವನಿಗೆ ಅವಮಾನವಾದಂತಾಗಿ, ಯಾರಿಗೂ ಹೇಳದೆ ಕೇಳದೆ ತನ್ನೂರಿಗೆ ಹಿಂತಿರುಗಿ, ಅಲ್ಲಿ ಸೋಮಾರಿಯಾಗಿ ಕಾಲ ಕಳೆದುಕೊಂಡಿದ್ದ.

ಹೀಗಿರಲು, ಕೋಮಲೆಗೆ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ತೇರ್ಗಡೆಯಾಗಿ ಅವಳಿಗೆ ಮದುವೆ ಮಾಡಬೇಕೆಂದು ಶಂಕರರಾಯರು ಹಂಬಲಿಸುತ್ತಿದ್ದಾಗ, ಅವರ ಹಂಬಲು ಮಣ್ಣುಗೂಡಿತು ಶಂಕರರಾಯರು ನ್ಯುಮೋನಿಯಾ ಜ್ವರಪೀಡಿತರಾಗಿ ಕಾಲವಶರಾದರು.

ಸುಂದರರಾಯರು ತಮ್ಮನ ಅಂತ್ಯ ಸಂಸ್ಕಾರಗಳಿಗೆಂದು ಬಂದಿದ್ದವರು, ಸಂಸ್ಕಾರಗಳನ್ನೆಲ್ಲ ಪೂರೈಸಿಕೊಂಡು, ಕೋಮಲೆಯ ವಶಕ್ಕೆ ನೂರು ರೂಪಾಯಿ ಮಾತ್ರ ಕೊಟ್ಟು, ಹುಸಿಕಂಬನಿ ಸುರಿಸಿ ಹೊರಟುಹೋದರು. ನಿಮ್ಮ ಮುಂದಿನ ಗತಿ ಏನೆಂದು ಅವಳನ್ನಾಗಲಿ ಅವಳ ತಾಯಿಯನ್ನಾಗಲಿ ಕೇಳಲಿಲ್ಲ. ಕೋಮಲೆಯ ದೊಡ್ಡಮ್ಮ (ತಾಯಿಯ ಅಕ್ಕ) ದೊಡ್ಡಪ್ಪ ಇವರೂ ಬಂದಿದ್ದರು. ಅವರುಗಳು ಎಷ್ಟು ಬಗೆ ಬೇಡಿಕೊಂಡರೂ ಅವರ ಜೊತೆ ಹೋಗಲೊಪ್ಪಲಿಲ್ಲ ಕೋಮಲೆಯ ತಾಯಿ; ಕಡು ಬಡವರಾಗಿದ್ದ ಅವರಿಗೆ ತಾನೂ ತನ್ನ ಮಗಳೂ ಹೊರೆಯಾಗಿರಲು ಆಕೆ ಇಷ್ಟಪಡಲಿಲ್ಲ. ನೆರವಿಗೆ ಮಂಜುನಾಥನ ಸಹಾಯ ಮಾತ್ರ ಕೋರಿದರು; 'ನಾನು ಚಿಕ್ಕಪ್ಪನ ಋಣ ತೀರಿಸುತ್ತೇನೆ' ಎಂದು ಅವನು ಸಂತೋಷದಿಂದ ಇರಲೊಪ್ಪಿದ.

ಶಂಕರರಾಯರೂ ಸುಮಾರು ೫೦೦ ರೂಪಾಯಿಗಳಷ್ಟು ಮಾತ್ರ ಇಟ್ಟು ಹೋಗಿದ್ದರು, ಅಷ್ಟೆ. ಆದರಿಂದ ಒಂದು ವರ್ಷ ಕಾಲ ನೂಕಿದರು. ಈ ಮಧ್ಯೆ ಮಂಜುನಾಥ ಮೋಟಾರು ನಡಸುವುದನ್ನು ಕಲಿತು, ತನ್ನ ಸ್ನೇಹಿತನೊಬ್ಬನ ಸಲಹೆಯ ಮೇರೆ ಬೊಂಬಾಯಿಗೆ ಹೋಗಬೇಕೆಂದು ಯೋಚಿಸುತ್ತಿದ್ದ. ಆ ವೇಳೆಗೆ ಒಂದು ಇಂಗ್ಲಿಷ್ ಪತ್ರಿಕೆಯಲ್ಲಿ, ರೂಪವತಿಯರೂ

ವಿದ್ಯಾವತಿಯರೂ ಆದ ನಟಿಯರು ಬೇಕೆಂಬ ಪ್ರಕಟನೆಯನ್ನು ಕೋಮಲೆ ಓದಿದಳು; ಗುಟ್ಟಿನಲ್ಲಿ ತನ್ನ ಫೋಟೋ ಕಳಿಸಿ ಅರ್ಜಿ ಬರೆದುಕೊಂಡಳು. ಅರ್ಜಿಗೆ ಪುರಸ್ಕಾರ ದೊರೆಯಿತು. 'ನೀನು ಬೊಂಬಾಯಿಗೆ ಹೋಗುವುದಾದರೆ ನಾನು ಬರುತ್ತೇನೆ' ಎಂದು ತನ್ನ ಉದ್ದೇಶವನ್ನು ಅಣ್ಣ ಮಂಜುನಾಥನಿಗೆ ತಿಳಿಸಿದಳು ಕೋಮಲೆ. ಮಂಜುನಾಥ ಅವಳ ತಾಯಿಯ ಅನುಮತಿ ಕೇಳಿದ. ಮಗಳು ನಟಿಯಾಗುವುದಕ್ಕೆ ಅವರು ಸಮ್ಮತಿ ಕೊಡಲಿಲ್ಲ. ಆದರೆ ಕೋಮಲೆ ತನ್ನ ಛಲ ಬಿಡಲಿಲ್ಲ. ಇಷ್ಟವಿಲ್ಲದಿದ್ದರೂ ತಾಯಿ ಮಗಳನ್ನು ಬೊಂಬಾಯಿಗೆ ಹಿಂಬಾಲಿಸಬೇಕಾಗಿ ಬಂತು.

ಪ್ರಾರಂಭದಲ್ಲಿಯೇ 'ತಾರೆ'ಯ ಪದವಿ ಕೋಮಲೆಗೆ ಲಭಿಸಲಿಲ್ಲ; ಚಿತ್ರ ತಯಾರಿಕೆಯ ಸಂಸ್ಥೆಯಲ್ಲಿ ಮಾನವನ್ನು ಕಾಪಾಡಿಕೊಂಡು ಕೆಲಸ ಮಾಡುವುದು ಬಹು ಕಷ್ಟವೆಂದು ಬೇಗನೆ ಅವಳ ಅನುಭವಕ್ಕೆ ಬಂತು; ಆದರೂ ಅವಳು ಎದೆಗೆಡದೆ ಐದುವರ್ಷ ಕಾಲ ಸಾಧನೆ ಮಾಡಿದಳು: ನಾಟ್ಯ ಕಲಾ ಸಾಧನೆ, ಹಾಗೂ ಪ್ರಲೋಭನಗಳಿಗೆ ಒಳಗಾಗದೆ ಮಾನ ಕಾಪಾಡಿಕೊಳ್ಳುವ ಮಹಾ ಸಾಧನೆ. ಎರಡೂ ಸಾಧನೆಗಳಲ್ಲಿ ಜಯಶೀಲಳಾಗಿ 'ಸ್ವರ್ಣಲತೆ'ಯಾಗಿ ಪ್ರಸಿದ್ಧಿಗೆ ಬಂದಳು.

ಸ್ವರ್ಣಲತೆ ತುಂಬ ಹಣ ಸಂಪಾದನೆ ಮಾಡುತ್ತಿದ್ದರೂ ಮಂಜುನಾಥ ತನ್ನ ವೃತ್ತಿ ಮಾತ್ರ ಬಿಡಲಿಲ್ಲ. ವೃತ್ತಿಯಲ್ಲಿದ್ದುಕೊಂಡೇ ತಂಗಿಗೆ ಬಹು ವಿಧಗಳಲ್ಲಿ ನೆರವಾಗುತ್ತಿದ್ದ.

ಕೋಮಲೆ ನಟಿಯಾದಮೇಲೂ ಅವಳಿಗೆ ಮದುವೆ ಮಾಡಬೇಕೆಂದು ಅವಳ ತಾಯಿ ತುಂಬ ಪ್ರಯತ್ನಪಟ್ಟರು; ಅವರು ಪಟ್ಟ ಪ್ರಯತ್ನಗಳೆಲ್ಲ ನಿಷ್ಫಲವಾದುವು. ಕೊರಗು, ರೋಗ–ಎರಡೂ ಕಾಲುಹಾಕಿಕೊಂಡು, ಬೊಂಬಾಯಿಗೆ ಹೋದ ಒಂದೆರಡು ವರ್ಷಗಳಲ್ಲಿಯೇ ಅವರು ಕಾಲವಾಗಿ ಹೋಗಿದ್ದರು.

ಸಿನಿಮಾ ವೃತ್ತಿಯಲ್ಲಿಯೇ ಇದ್ದ ಹಲವರು 'ಸ್ವರ್ಣಲತೆ'ಯನ್ನು ಮದುವೆಯಾಗಲು ಸಿದ್ಧರಾಗಿದ್ದರು; ಆ ವೃತ್ತಿಯಲ್ಲಿಲ್ಲದವರನ್ನು ಮದುವೆಯಾಗಿ, ಅದನ್ನು ಬಿಟ್ಟು ತನ್ನ ಹುಟ್ಟಿದೂರಾದ ಬೆಂಗಳೂರಿಗೆ ಹಿಂತಿರುಗಿ

ಗೃಹಿಣಿಯಾಗಿ ನೆಲಸಬೇಕೆಂಬುದು ಅವಳ ಇಚ್ಛೆಯಾಗಿತ್ತು. ಆದರೆ, ಅವಳ ಇಚ್ಛೆ ಸಲ್ಲಿಸುವವರು ಮಾತ್ರ ಯಾರೂ ದೊರಕಿರಲಿಲ್ಲ.

* * * * *

ಮತ್ತೊಮ್ಮೆ ಕೋಮಲೆಯನ್ನು ಕಾಣಲು ಸಾಧ್ಯವಾಗಲಿಲ್ಲ. ಮಂಜುನಾಥನೇನೋ ಒಮ್ಮೆ ಬಂದು ನಮ್ಮನ್ನು ಕರೆದ. ಹೋಗಬೇಕೆನ್ನುವುದರಲ್ಲಿಯೇ ದಿನಗಳು ಉರುಳಿಹೋದುವು. ನನ್ನ ಬೊಂಬಾಯಿನ ಪ್ರವಾಸವೂ ಮುಗಿದು, ನಾನು ಬೆಂಗಳೂರಿಗೆ ಹಿಂದಿರುಗಿದೆ.

ಬೆಂಗಳೂರಿಗೆ ಹಿಂದಿರುಗಿದ ಸ್ವಲ್ಪ ದಿನಗಳಲ್ಲಿಯೇ ಪ್ರಭಾಕರನಿಂದ ಒಂದು ಕಾಗದ ಬಂತು. ಲಕ್ಕೋಟೆ ಸ್ವಲ್ಪ ತೂಕವಾಗಿಯೇ ಇತ್ತು; ಒಡೆದು ನೋಡಿದೆ; ಅವನ ಕಾಗದದ ಜೊತೆಗೆ ಇನ್ನೊಂದು ಕಾಗದವಿತ್ತು: ಕೋಮಲೆ ಪ್ರಭಾಕರನಿಗೆ ಬರೆದದ್ದು. ಜೊತೆಗೆ ಅವಳ ಫೋಟೋ ಚಿತ್ರವೊಂದಿತ್ತು. ನಮ್ಮಿಬ್ಬರಿಗೂ ಒಂದೊಂದು ಕಳಿಸಿದ್ದಳಂತೆ. ನನಗೆಂದು ಕಳಿಸಿದ್ದನ್ನು ಪ್ರಭಾಕರ ನನಗೆ ತನ್ನ ಕಾಗದದೊಡನೆ ಕಳಿಸಿದ್ದ. ಕೋಮಲೆಯ ಕಾಗದ:

"ನಿಮಗೆ ಮದುವೆಯಾಗಿದೆಯೆಂದೂ ನಿಮಗೊಂದು ಮುದ್ದಾದ ಮಗುವಿದೆಯೆಂದೂ ಮಂಜುನಾಥ ನನಗೆ ತಿಳಿಸಿದ. ನೀವೂ ನಿಮ್ಮ ಮಿತ್ರರೂ ನನ್ನ ಪ್ರಾರ್ಥನೆ ಸಲ್ಲಿಸಲಿಲ್ಲ. ಪರವಾಯಿಲ್ಲ. ನಿಮ್ಮ ಮಿತ್ರರಿಗೆ ಮದುವೆಯಾಗಿದೆಯೆ?................"

ಪ್ರಭಾಕರ ಮೇಲ್ಕಂಡ ಕಾಗದದ ಸಂಬಂಧದಲ್ಲಿ ಹೀಗೆ ಬರೆದಿದ್ದ:

"ನಿಮ್ಮ ಮಿತ್ರರಿಗೆ ಮದುವೆಯಾಗಿದೆಯೇ ಎಂಬ ಅವಳ ಪ್ರಶ್ನೆಗೆ 'ಆಗಿದೆ' ಎಂದು ತಿಳಿಸಿದೆ. ಹಾಗೆ ತಿಳಿಸಲು ನನಗೇನೋ ತುಂಬ ವ್ಯಸನವಾಯಿತು. ನಿನಗೆ ಮದುವೆ ಆಗಿರದಿದ್ದರೆ ಚೆನ್ನಾಗಿತ್ತು."

'ನನಗೆ ಮದುವೆಯಾಗಿರದಿದ್ದರೆ ಚೆನ್ನಾಗಿತ್ತು' ಎಂದು ನನಗೂ ಅನ್ನಿಸಿತು. ಆದರೆ, ನಿಜವಾಗಿಯೂ ಆಗಿರದಿದ್ದರೆ ಕೋಮಲೆಯ ಕೈಹಿಡಿಯುವಷ್ಟು ಧೈರ್ಯ ನನಗೆ ಬರುತ್ತಿತ್ತೆ ಎಂದು ಸಂದೇಹವಾಯಿತು. ಕೋಮಲೆಯ ಫೋಟೋವನ್ನು ನನ್ನ ಹೆಂಡತಿಗೆ ತೋರಿಸುವಷ್ಟು ಧೈರ್ಯ ಕೂಡ

ನನ್ನಲ್ಲಿರಲಿಲ್ಲ! ಅದನ್ನು ಗೋಪ್ಯವಾಗಿಡುವ ಪ್ರಯತ್ನದಲ್ಲಿ, ಅದನ್ನೆಲ್ಲಿಯೋ ಕೈಮರೆತು ಇಟ್ಟುಬಿಟ್ಟೆ. ಇಂದಿನವರೆಗೂ ಸಿಕ್ಕಿಲ್ಲ.

ಈಚೆಗೆ 'ಸ್ವರ್ಣಲತೆ'ಯ ಹೊಸ ಚಿತ್ರವಾವುದೂ ಬಂದಿಲ್ಲ. ಪ್ರಭಾಕರನಿಗೆ ಬರೆದ ಕಾಗದವೊಂದರಲ್ಲಿ ಅವಳ ವಿಚಾರ ಪ್ರಸ್ತಾಪಿಸಿ ಬರೆದೆ. ಮಂಜುನಾಥನೇ ಕಣ್ಣಿಗೆ ಬೀಳುತ್ತಿಲ್ಲವೆಂದೂ, ಸ್ವರ್ಣಲತೆ ಮೊದಲಿದ್ದ ಮನೆಯಲ್ಲಿ ಹೋಗಿ ವಿಚಾರಿಸಲಾಗಿ ಅವಳು ಅಲ್ಲಿರಲಿಲ್ಲವೆಂದೂ, ಅವಳ ವಿಚಾರ ತನಗೆ ಏನೂ ತಿಳಿಯದೆಂದೂ, ಅವಳ ವಿಚಾರವನ್ನೇ ತಾನು ಮರೆತುಬಿಟ್ಟಿದ್ದನೆಂದೂ, ಪ್ರಭಾಕರ ನನಗೆ ಬರೆದ ಉತ್ತರದಲ್ಲಿ ತಿಳಿಸಿದ.

ನಾನೂ ಕೂಡ ಚಿತ್ರಪಟ ತಾರೆ ಸ್ವರ್ಣಲತೆಯನ್ನು ಮರೆತಿದ್ದೆ; ಆದರೆ ಕೋಮಲೆಯನ್ನು ಮರೆತಿರಲಿಲ್ಲ. ಈಗಲೂ ಮರೆತಿಲ್ಲ; ಅವಳು ನನ್ನ 'ಚಿತ್ತಪಟತಾರೆ'ಯಾಗಿ ಬೆಳಗುತ್ತಿದ್ದಾಳೆ. ಅವಳನ್ನು ನೆನೆದಾಗಲೆಲ್ಲ, ಹೃದಯದಲ್ಲಿ ಒಂದು ಬಗೆಯ ಕಳವಳವುಂಟಾಗುತ್ತದೆ.

# ಹಸ್ತಪರಿಗ್ರಹಣ

"ಸೀತು, ಇದನ್ನು ಯಾರಿಗೂ ಹೇಳಬೇಡವೋ ಅಪ್ಪ. ನಿನ್ನಲ್ಲೇ ಗೋಪ್ಯವಾಗಿಟ್ಟುಕೊಂಡಿರೊ" ಎಂದು ಅಂಗಲಾಚಿ ಬೇಡಿಕೊಂಡ ನನ್ನ ಪರಮಮಿತ್ರ 'ಕೆ. ಸಿ.'

"ಆಗಲಿ" ಎಂದು ಅವನಿಗೆ ಮಾತುಕೊಟ್ಟೆ. ಹಾಗೆಂದು ಅವನಿಗೆ ಮಾತುಕೊಟ್ಟದ್ದು ಎಷ್ಟೋ ಅಷ್ಟೆ. ಮಾರನೆಯ ದಿನವೇ ಸಿಕ್ಕಿದ ಮತ್ತೊಬ್ಬ ಗೆಳೆಯನ ಕೂಡ 'ಕೆ. ಸಿ.' ಹೇಳಿದ ಸಂಗತಿಯನ್ನು ಅವನು ನನಗೆ ಹೇಳಿದ್ದಕ್ಕಿಂತ ಸ್ವಾರಸ್ಯವಾದ ರೀತಿಯಲ್ಲಿ ಹೇಳಿ, "ಇದನ್ನು ಯಾರಿಗೂ ಹೇಳಬೇಡವೆಂದು 'ಕೆ. ಸಿ.' ನನ್ನಲ್ಲಿ ಬಹು ಸಂಕೋಚಪಟ್ಟುಕೊಂಡು ತಿಳಿಸಿದ್ದಾನೆ. ಇದನ್ನು ಯಾರಿಗೂ ಹೇಳಬೇಡ. ನಿನ್ನಲ್ಲೇ ಇರಲಿ" ಎಂದು ಸೂಚನೆಕೊಟ್ಟೆ. ಆ ಮತ್ತೊಬ್ಬ ಗೆಳೆಯ ತನ್ನ ಆಪ್ತ ಸ್ನೇಹಿತನಿಗೆ, ಆ ಆಪ್ತ ಸ್ನೇಹಿತ ತನ್ನ ಹೃದಯದ ಮಿತ್ರನಿಗೆ, ಆ ಹೃದಯದ ಮಿತ್ರ ತನ್ನ ಏಕಾಂತದ ಒಡನಾಡಿಗೆ....ಹೀಗೆ ಗೆಳೆಯರಿಂದ ಗೆಳೆಯರಿಗೆ ಹಬ್ಬಿ, ನನ್ನ ಇನ್ನೊಬ್ಬ

ಆಪ್ತಮಿತ್ರನಿಂದ ನನಗೇ ವಾಪಸು ಮುಟ್ಟಿತು 'ನಡೆದ ಸಂಗತಿ'—ನಾನು ನಂಬಲಾಗದ ರೀತಿಯಲ್ಲಿ! ವಾಸ್ತವವಾಗಿ ಅದನ್ನು ನಾನು ಮೊದಲು ನಂಬಲಾಗಲಿಲ್ಲ;. ಅದರಲ್ಲಿಯೂ, ನಾನು ಹೇಳಿದ ಸಂಗತಿಯೊಂದರ ಮೇಲೆ ಬೆಳೆದ ಕಥೆ ಎಂದು ನಂಬುವುದಕ್ಕೆ ಆಗಲೇ ಇಲ್ಲ. ನಾನು ಕೇಳಿದ ಕಥೆ ತೀರ ವಿಚಿತ್ರವಾಗಿದ್ದುದರಿಂದಲೇ ಅದರ ಸ್ವರೂಪ ವಿಶ್ಲೇಷಣಕ್ಕೆ ತೊಡಗಿ, ಅದರ ಪರಿಣಾಮವಾಗಿ, ನಾನು ಹೇಳಿದ ಸಂಗತಿಯ ಆಧಾರದ ಮೇಲೇ ಈ ವಿಚಿತ್ರಕಥೆ ವ್ಯೈತಾಳಿದೆಯೆಂದು ನನಗೆ ಖಚಿತವಾದದ್ದು. ನನಗೆ ಹಾಗೆ ಖಚಿತವಾದ ಮೇಲೆ ಅದೇ ಕಥೆಯನ್ನು ನಾನು ಕೇಳಿದ ರೀತಿಯಲ್ಲಿ 'ಕೆ. ಸಿ.'ಗೆ ಮರುಚಿ ಹೇಳಿದೆ. ಸ್ವಲ್ಪವೂ ಉತ್ಪ್ರೇಕ್ಷೆಮಾಡಲಿಲ್ಲ. "ಕಥೆ ಬಹು ವಿಚಿತ್ರವಾಗಿದೆ" ಎಂದ ಕೇಳಿದ ಮೇಲೆ 'ಕೆ. ಸಿ.' "ನಡೆದದ್ದು" ಎಂದೆ ನಾನು. "ನಡೆದದ್ದೆ!" ಎಂದು ಅಚ್ಚರಿಗೊಂಡ ನನ್ನ ಗೆಳೆಯ! "ಆಶ್ಚರ್ಯವೇಕೆ? ನೀನೇ ಕಥಾ ನಾಯಕ!" ಎಂದೆ. "ನಾನು ನಂಬಲಾರೆ. ಅಷ್ಟು ಮೂಢನೆ, ಅಷ್ಟು....ಅಷ್ಟು....ನನಗೆ ನೆನಪಿಲ್ಲ. ಏನು ನನ್ನನ್ನ ಹಾಸ್ಯಮಾಡುತ್ತಿದ್ದಿಯೋ ಹೇಗೆ?" ಎಂದು ರೇಗಿದ. "ರೇಗಬೇಡಾ, ಮಿತ್ರ. ವಿಚಾರ ಹೀಗೆ" ಎಂದು, ನಾನು ಕೊಟ್ಟ ಮಾತು ಮರೆತು ಸಂಗತಿಯನ್ನು ಇನ್ನೊಬ್ಬರಿಗೆ ಹೇಳಿದ್ದರ ಫಲವಾಗಿ ಹೇಗೆ ಒಂದು ಕಥೆ ಹುಟ್ಟಿಕೊಂಡಿತೆಂಬುದನ್ನು ವಿವರಿಸಿ, ಹಾಗೆ ವಚನಭಂಗ ಮಾಡಿದ್ದಕ್ಕಾಗಿ ಮಿತ್ರನ ಕ್ಷಮೆ ಕೇಳಿ, ಸಿದ್ಧವಾಗಿರುವ ಕಥೆಯನ್ನು 'ರಿಕಾರ್ಡ್' (ಲಿಖಿತ) ಮಾಡಲು ಅವನ ಅಡ್ಡಿಯುಂಟೇ ಎಂದು ಕೇಳಿದೆ. 'ಕೆ. ಸಿ.' ಮತ್ತಷ್ಟು ರೇಗಿ, "ನನ್ನನ್ನು ಕೇಳಿ ಕೊಟ್ಟ ಮಾತು ಮುರಿದೆಯಾ? ನಿನ್ನ ಇಷ್ಟ ಬಂದಹಾಗೆ ಮಾಡು" ಎಂದ. "ನೋಡು, ಆದದ್ದು ಆಯಿತು. ನಾನು ಬರೆಯುವ ಕಥೆ ಓದಿ ಒಬ್ಬಿಬ್ಬರಾದರೂ ಆನಂದಪಟ್ಟರೆ ನಾನು ನಿನಗೆ ದ್ರೋಹಮಾಡಿದ್ದಕ್ಕೆ ತಕ್ಕ ಪರಿಹಾರವಾದಂತಾಗುವುದಿಲ್ಲವೆ?" ಎಂದು ಸಮಾಧಾನಮಾಡಹೋದೆ. "ಹುಣ್ಣಿನ ಮೇಲೆ ಬರೆಬೇರೆ ಹಾಕುತ್ತೀಯೇನು?"—"ಖಂಡಿತ ನಿನ್ನ ಹೆಸರು ಹಾಕುವುದಿಲ್ಲ. ಇಷ್ಟಕ್ಕೂ, ನಾನು ಬರೆಯುವ ಕಥೆಯ ನಾಯಕ ನಿನ್ನಿಂದ ಸಂಪೂರ್ಣ ಬೇರೆ! ಹೀಗಿರುವಾಗ ನಿನ್ನ ಆಭ್ಯಂತರ ಏಕೆ? ಆದರೂ ನಿನ್ನ ಒಪ್ಪಿಗೆ ಇಲ್ಲದಿದ್ದರೆ ನಾನು ಬರೆದು ಪ್ರಕಟಿಸುವುದಿಲ್ಲ" ಎಂದೆ. ನನ್ನ ವಾದ ಒಪ್ಪಿ,

ನನ್ನ ಕೋರಿಕೆಗೂ ಒಪ್ಪಿದ 'ಕೆ. ಸಿ.' ('ಕೆ. ಸಿ.' ಬರಿಯ ಸಂಕೇತಾಕ್ಷರಗಳು, ಅಷ್ಟೆ; ನನ್ನ ಮಿತ್ರನ initials—ಮೊದಲಕ್ಷರಗಳು—ಕೂಡ ಅಲ್ಲ) ಆದ್ದರಿಂದ, ಈ ಕಥೆ ಓದಿ ವಾಚಕರ ಮೊಗದಲ್ಲಿ ಮೆಚ್ಚಿಗೆಯ ಒಂದು ಮೆಲು ನಗೆಯಾಡಿದರೆ, ಆ ಸಾರ್ಥಕತೆಯ ಫಲಕ್ಕೆ ಹಕ್ಕುದಾರ ಮೊದಲು ನನ್ನ ಮಿತ್ರ 'ಕೆ. ಸಿ.'; ತರುವಾಯ, ಕಥೆ ಬೆಳಸಿದ ಇನ್ನಿತರ ಮಿತ್ರ ಮಹಾಶಯರು; ಅದನ್ನು ಲಿಖಿತ ಮಾಡಿದ ನಿಮಿತ್ತ ಮಾತ್ರನಾದ ನಾನಲ್ಲ, ಎಷ್ಟು ಮಾತ್ರಕ್ಕೂ.

ಇಷ್ಟು, ಕತೆಗಡುಬಿನ ಮೇಲು ಹೊದಿಕೆ; ಮುಂದಿನದು ಹೂರಣ.

(ಕಥೆಯಲ್ಲಿ ಬರುವ 'ನಾನು' ನಾನಲ್ಲ; 'ಕೆ. ಸಿ.'ಯೇ ತನ್ನ ಅನುಭವ ಹೇಳಿದ ರೀತಿಯಲ್ಲಿ ಹೇಳಿದೆ.)

* * * * *

"ನೋಡು, ಸೀತು; ಇದು ನಡೆದದ್ದು ಮೂರು ನಾಲ್ಕು ವರ್ಷಗಳ ಕೆಳಗೆ ನೆನಸಿಕೊಂಡರೆ ನನಗೇ ನಗು ಬರುತ್ತದೆ.

"ಆಗ ನನಗೆ ಹೊಸದಾಗಿ ಬೆಂಗಳೂರಿಗೆ ವರ್ಗವಾಗಿತ್ತು. ಇನ್ನೂ ಮನೆ ಮಾಡಿರಲಿಲ್ಲ. ಮಲ್ಲೇಶ್ವರದಲ್ಲಿ ಒಂದು ಹೋಟೆಲಿನಲ್ಲಿ ಇದ್ದೆ. ಈಗ ಆ ಹೋಟೆಲು ಮುಚ್ಚಿಬಿಟ್ಟಿದೆ. ಅದು 'ಅಯ್ಯರ್ ಹೋಟೆಲು' ಎಂದು ಪ್ರಸಿದ್ಧಿಯಾಗಿತ್ತು. ಹೋಟೆಲು ವಾಸ ಅದೇ ನನಗೆ ಮೊದಲು. ಅಲ್ಲಿ ನಾನೊಬ್ಬನೇ ಜುಟ್ಟುಬಿಟ್ಟುಕೊಂಡಿದ್ದು, ಅಡಿಗೆಮನೆಯಲ್ಲೆ ಕುಳಿತು ಪರಿಶೇಚನೆಮಾಡಿ ಊಟ ಮಾಡುತ್ತಿದ್ದವನು. ಎಲ್ಲರೂ ನನ್ನನ್ನು "ಮಡಿ ಶಾಸ್ತ್ರಿ" ಎಂದು ಹಾಸ್ಯ ಮಾಡುತ್ತಿದ್ದರು. ಯಾರು ಎಷ್ಟೇ ಹಾಸ್ಯ ಮಾಡಿದರೂ ಸುಮ್ಮನೆ ನಕ್ಕುಬಿಡುತ್ತಿದ್ದೆ. ನನ್ನ ಒಳ್ಳೆಯತನ ಕಂಡು ಹೋಟೆಲಿನವರಿಗೆಲ್ಲ ನನ್ನಲ್ಲಿ ತುಂಬ ಸಲಿಗೆ, ಗೌರವ.

"ಸೆಂಟ್ರಲು ಕಾಲೇಜು ಹಾಸ್ಟೆಲಿನಲ್ಲಿ ನನ್ನ ಭಾವಮೈದುನ ಓದಿಕೊಂಡಿದ್ದ. ನಾನು ಬೆಂಗಳೂರಿಗೆ ಬಂದ ಮೇಲೆ ಅವನು ಪ್ರತಿ ಭಾನುವಾರ ನನ್ನ ಹೋಟೆಲಿಗೆ ಬಂದು, ದಿನವನ್ನೆಲ್ಲಾ ಅಲ್ಲೇ ಕಳೆಯುತ್ತಿದ್ದ. ಹೋಟೆಲಿನಲ್ಲಿ ಪ್ರತಿ ಭಾನುವಾರವೂ ಇಸ್ಪೀಟು ಕಚೇರಿ ಸೇರುತ್ತಿತ್ತು. ನನಗೆ ಆಡುವುದಕ್ಕೆ ಬರುತ್ತಿರಲಿಲ್ಲ: ಸುಮ್ಮನೆ ನೋಡುತ್ತಿದ್ದೆ! ನನ್ನ ಭಾವಮೈದುನ

—ರಾಮುಚಂದ್ರ—ಕಚೇರಿಗೆ ದಾಖಲು ಮಾಡಿಕೊಂಡ; ನನ್ನೆದುರಿಗೆ ಧೈರ್ಯವಾಗಿ ದುಡ್ಡಿಟ್ಟು ಆಡುತ್ತಿದ್ದುದಲ್ಲದೆ, ಸಿಗರೇಟು ಸೇದುವುದಕ್ಕೂ ಮೊದಲು ಮಾಡಿಬಿಟ್ಟ! ನನ್ನ ಎದೆ ಒಡೆದು ಹೋಯಿತು.

"ಒಂದು ದಿನ ರಾಮುಚಂದ್ರ 'ಸಿನಿಮಾಕ್ಕೆ ಕರೆದುಕೊಂಡು ಹೋಗು ಭಾವಯ್ಯ' ಎಂದು ನನ್ನನ್ನು ಪೀಡಿಸಿದ. ನಾನು ಸಿನಿಮಾ ನೋಡಿದವನೇ ಅಲ್ಲ. ಅದರಿಂದ ಜನ ಕೆಟ್ಟುಹೋಗುತ್ತಾರೆಂದು ನನ್ನ ಎಣಿಕೆ. ನಾನು ಈಗ ಹೇಳುವ ಸಂಗತಿಯಿಂದ ನನ್ನ ಎಣಿಕೆ ದೃಢಪಟ್ಟಿದೆ. ನನ್ನ ಅಭಿಪ್ರಾಯ ಅವನಿಗೆ ತಿಳಿಸಿದೆ. ಏನುಮಾಡಿದರೂ ಅವನು ಒಪ್ಪಲಿಲ್ಲ. ತಾನೇ ನನ್ನನ್ನು ಕರೆದುಕೊಂಡು ಹೋಗುವುದಾಗಿ ಹೇಳಿ, ಅತ್ಯಂತ ಬಲವಂತ ಮಾಡಿ, ನನ್ನನ್ನು ಕಂಟೋನ್‌ಮೆಂಟಿನ ಒಂದು ಸಿನಿಮಾ ಮಂದಿರಕ್ಕೆ ಕರೆದುಕೊಂಡು ಹೋದ. ಪಾಪ, ಹುಡುಗನ ಕೈಲಿ ಏಕೆ ದುಡ್ಡು ತೆರಿಸಬೇಕೆಂದು, ನಾನೇ ಟಿಕೀಟಿನ ತೆರ ಕೊಟ್ಟೆ; ಯಾವ ತರಗತಿಗೆ ಹೋಗೋಣವೆಂದೆ; ೧ ರೂ. ೨ ಆಣೆಯದು ಎಂದ; ಅದೇ ತರಗತಿಗೆ ಹೋದೆವು.

"ಹೋದಾಗ ಹೊತ್ತಾಗಿದ್ದುದರಿಂದಲೂ, ಆ ಚಿತ್ರಕ್ಕೆ ಅದೇ ಮೊದಲ ದಿನವಾದ್ದರಿಂದಲೂ, ಚಿತ್ರಮಂದಿರ ತುಂಬಿಹೋಗಿತ್ತು. ನಾನು ಹೋದ ತರಗತಿಯಲ್ಲಿ ಕೊನೆಯ ಸಾಲಿನಲ್ಲಿ, ಬಲಕೊನೆಯಲ್ಲಿ ಮೂರು ಸ್ಥಳಗಳು ಮಾತ್ರ ತೆರಪಾಗಿದ್ದುವು.

"ಚಿತ್ರಮಂದಿರದೊಳಗಿನ ಪರಿಸ್ಥಿತಿ ನೋಡಿ ನಾನು ದಂಗುಬಡಿದು ಹೋದೆ. ಹೆಂಗಸರು ಗಂಡಸರು ಎಂಬ ಭೇದವಿಲ್ಲದೆ ಎಲ್ಲಾ ಒಟ್ಟಾಗಿ ಕುಳಿತಿದ್ದರು. ಇಂಗ್ಲಿಷು ಹೆಂಗಸರು, ಆಂಗ್ಲೊಇಂಡಿಯನ್ ಹೆಂಗಸರು, ದೇಶೀಯ ಕ್ರೈಸ್ತ ಹೆಂಗಸರು ಇವರೆಲ್ಲ ಬಹು ಸುಂದರಿಯರು, ಸ್ವಾತಂತ್ರ್ಯ ಶೀಲರು ಎಂದು ಕೇಳಿದ್ದೆ, ಓದಿದ್ದೆ; ಕಂಡಿರಲಿಲ್ಲ. ಇವೊತ್ತು ಕಣ್ಣಾರೆ ಕಂಡಹಾಗಾಯಿತು. ಹೆಂಗಸರು ಸಿಗರೇಟು ಸೇದುತ್ತಿದ್ದುದನ್ನು ನೋಡಿ, ರಾಮುಚಂದ್ರ ಸೇದಿದರೇನು ಮಹಾ ಎನ್ನಿಸಿತು.

ಅಂದು ರಾಮುಚಂದ್ರ ನನಗೆ ವಿಚಿತ್ರ ವೇಷಭೂಷ ಬೇರೆ ತೊಡಿಸಿಬಿಟ್ಟಿದ್ದ. ಕಂಟೋನ್‌ಮೆಂಟಿನ ಚಿತ್ರಮಂದಿರಕ್ಕೆ ಸೂಟು ಹಾಕಿಕೊಳ್ಳದೆ ಹೋದರೆ ಎಲ್ಲರೂ ನಗುತ್ತಾರೆ ಎಂದು ಸುಳ್ಳು ಬೆದರಿಸಿ, ತನ್ನ ಸೂಟನ್ನೆ ನನಗೆ

ತಗುಲಿಸಿದ್ದ. ಅವನದು ನನಗೆ ಹಿಡಿಸದು; ಬಹು ಬಿಗಿ; ಅದನ್ನು ನೋಡಿ ಅವನೇ ನಕ್ಕ. ನಾನು ಸ್ವಲ್ಪ ಹಿಂದೇಟು ಹೊಡೆದಾಗ, 'ಭೇಷಾಗಿದೆ ಭಾವಯ್ಯ, ಹೆದರ ಬೇಡ' ಎಂದ. ತನ್ನದೇ ಒಂದು ಹ್ಯಾಟನ್ನೂ ತಲೆಯ ಮೇಲಿಟ್ಟ. ಇಷ್ಟೆಲ್ಲಾ ಆದರೂ, ಅವನ ಜೋಡು ನನಗೆ ಹಿಡಿಸದು. ನಾನು ಹಾಕುತ್ತಿದ್ದದ್ದು ಚಪ್ಪಲಿ. ಭಾವಮೈದುನನ ಕಾಟಕ್ಕೆ ಸಿಲುಕಿ ಅಂದಿನ ಬೆಳಗ್ಗೆಯೇ ಒಂದು ಹೊಸ ಜೊತೆ ಜೋಡು ತೆಗೆದದ್ದಾಗಿತ್ತು. ಇಷ್ಟೆಲ್ಲಾ ಸಿದ್ಧತೆಯಾದ ಮೇಲೆ, ಸಿನಿಮಾಕ್ಕೆ ಹೋಗೋಣವೆಂದು ಹೊರಟರೆ ಜೋಡಿನ ಹೊಸ ಅನುಭವ, ನಡೆಯುವುದಕ್ಕಾಗದು; ಗಾಡಿ ಮಾಡಿಕೊಂಡೇ ಹೊರಟೆವು.

"ಸಿನಿಮಾ ಮಂದಿರವನ್ನು ಹೊಕ್ಕಾಗ ನನಗೆ ಉಂಟಾದ ಆಶ್ಚರ್ಯವನ್ನು ಹಿಂದೆಯೇ ಹೇಳಿದೆನಲ್ಲ. ತೆರಪಿದ್ದ ಮೂರು ಸ್ಥಳಗಳಲ್ಲಿ ಕಡೆಯದರಲ್ಲಿ ನಾನು ಕುಳಿತೆ. ನನ್ನ ಎಡಗಡೆ ಇನ್ನೆರಡು ಸ್ಥಳಗಳು ತೆರಪಿದ್ದವು ನನ್ನ ಭಾವಮೈದುನ ನನ್ನನ್ನು ಸರಿದುಕೋ ಎಂದು ಸನ್ನೆ ಮಾಡಿದ; ಸರಿದುಕೊಂಡೆ. ಇನ್ನೂ ಸರಿದುಕೋ ಎಂದು ಮತ್ತೆ ಸನ್ನೆಮಾಡಿದ. ನನಗೆ ಸರಿಯಲು ಇಷ್ಟವಿರಲಿಲ್ಲ; ಪಕ್ಕದಲ್ಲಿ ಒಂದು ಅವಲಕ್ಷಣದ ಕೆಂಪು ಮುದುಕಿ ಕುಳಿತಿತ್ತು. ಅಷ್ಟು ಹೊತ್ತಿಗೆ ಇನ್ನೊಬ್ಬಳು ಫರಂಗಿ ತರುಣಿ ನಮ್ಮೆಡೆಗೇ ಬರುತ್ತಿದ್ದಳು. ಸುಮ್ಮನಿದ್ದಿದ್ದರೆ, ಅವಳು ನನ್ನ ಎಡಗಡೆ ಮುದುಕಿಯ ಪಕ್ಕದಲ್ಲಿ ಬಂದು ಕೂರುತ್ತಿದ್ದಳು. ನಾನು ರಾಮಚಂದ್ರನ ಒತ್ತಾಯಕ್ಕೆ ತಲೆಬಾಗಿ ಮುದುಕಿಯ ಹತ್ತಿರ ಸರಿದು ಕುಳಿತಾಗ, ರಾಮಚಂದ್ರ ನಿಂತೆಡೆಯಲ್ಲೆ, ಕಡೆಯ ಸೀಟಿನಲ್ಲಿ ಕುಕ್ಕರಿಸಿಬಿಟ್ಟ. ಆಂಗ್ಲ ತರುಣಿ ನನ್ನ ಬಲಪಕ್ಕದಲ್ಲಿ ನಮ್ಮಿಬ್ಬರ ನಡುವೆ, ಧೈರ್ಯವಾಗಿ ಬಂದು ಕುಳಿತೇಬಿಟ್ಟಿದ್ದಳು. 'ಒಳ್ಳೇ ಅದೃಷ್ಟ ಭಾವಯ್ಯ ನಿನ್ನದು' ಎಂದ ಕನ್ನಡದಲ್ಲಿ ರಾಮಚಂದ್ರ. ಏನು ಅದೃಷ್ಟವೋ ಏನೋ, ನನಗೆ ಬೇರೆ ತಿಳಿಯಲಿಲ್ಲ.

"ಚಿತ್ರ ಮೊದಲಾಗಲು ಇನ್ನೂ ಬಹಳ ಹೊತ್ತಿತ್ತು. ಎಲ್ಲರೂ ಮಾತಾಡಿಕೊಳ್ಳುತ್ತಿದ್ದರು, ಲಲ್ಲೆ ಹೊಡೆಯುತ್ತಿದ್ದರು, ಚೆಲ್ಲಾಟವಾಡುತ್ತಿದ್ದರು. ಇದನ್ನೆಲ್ಲಾ ನೋಡಿಯೂ ನೋಡದವನಂತೆ ನಾನು ಒಂದೇ ಸಮನೆ ಬಿಳಿಯ ಪರದೆ ದಿಟ್ಟಿಸಿ ನೋಡುತ್ತಿದ್ದೆ. ಆದರೆ, ಗಂಡಸರು ಹೆಂಗಸರು

ಆದಿಯಾಗಿ ಎಲ್ಲರೂ ನನ್ನ ಕಡೆಯೇ ನೋಡುತ್ತಿದ್ದಂತೆ ತೋರಿತು ನನಗೆ. ತುಸ ಹೊತ್ತಾದ ಮೇಲೆ ತೋರಿತು, ನನ್ನನ್ನಿರಲಾರದು, ನನ್ನ ಪಕ್ಕದಲ್ಲಿದ್ದ ಆಂಗ್ಲ ನವ ತರುಣಿಯನ್ನಿಕಬೇಕೆಂದು. ಆಗ ಅವಳನ್ನು ಒಮ್ಮೆ ನೋಡ ಬೇಕೆಂದು ಅನ್ನಿಸಿತು ನನಗೆ. ಇದರಲ್ಲೇನಪ್ಪ ಆಶ್ಚರ್ಯ? ಸುಂದರ ವ್ಯಕ್ತಿ ಯೊಂದು ಪಕ್ಕದಲ್ಲೇ ಇರುವಾಗ ಅದನ್ನು ನೋಡುವುದೂ ತಪ್ಪೆ? ಪಾಪವೇ? ಪಕ್ಕಕ್ಕೆ ತಿರುಗಿ ನೋಡಿಯೇಬಿಟ್ಟೆ. ಆಹಾ! ಎಂತಹ ಸೌಂದರ್ಯ ಅನ್ನುತಿ, ಸೀತು? ಅಂತಹ ಸೌಂದರ್ಯ! ಇನ್ನೂ ನೋಡಬೇಕು ಅಂತ ಆಸೆ, ನೋಡುತ್ತ ಕುಳಿತರೆ ಎಲ್ಲಿ ಬೆಪ್ಪುತಕಡಿ ಆಗುತ್ತೇನೊ ಅಂತ ಭಯ. ಪೌಡರು ಸೆಂಟುಗಳ ಪರಿಮಳ ಬೇರೆ ಘಮಘಮಿಸುತ್ತಿತ್ತು. ಆದರೂ, ಮರು ಗಳಿಗೆಯಲ್ಲೇ, ಇಬ್ಬರು ಹೆಂಗಸರ ನಡುವೆ ಕುಳಿತಿದ್ದದ್ದು ನನ್ನ ಮನಸ್ಸಿಗೆ ಏನೋ ಸರಿಬೀಳಲಿಲ್ಲ. ಹಾಲುಕೆರೆನಲ್ಲಿ ಬಿದ್ದ ನೊಣದಂತೆ ಒದ್ದಾಡುತ್ತಿದ್ದೆ.

"ಅಷ್ಟರಲ್ಲಿ ನನ್ನ ಹಿಂದುಗಡೆಯ ಸಾಲಿನಿಂದ ದೊಡ್ಡ ಕೇಕೆ ಎದ್ದಿತು. ಏಕೋ ಏನೋ ಗೊತ್ತಾಗಲಿಲ್ಲ. ಇದಕ್ಕಿದ್ದ ಹಾಗೆ, ರಾಮಚಂದ್ರ ಹಿಂದಿ ನಿಂದ ನನ್ನ ಬೆನ್ನು ತಿವಿದ. 'ಏನೊ?' ಎಂದು ಕೇಳಿದಾಗ ತಲೆಯ ಕಡೆ ಸನ್ನೆ ಮಾಡಿ ತೋರಿಸಿದ, ಹ್ಯಾಟು ತೆಗೆದುಕೊ ಎಂದು ಸೂಚಿಸಿದ. ಒಳಕ್ಕೆ ಬಂದಾಗ ಹ್ಯಾಟು ತೆಗೆದು ಕುಳಿತುಕೊಳ್ಳಬೇಕು ಎಂದು ನನಗೆ ತಿಳಿಯದು. ನಾನು ಹ್ಯಾಟು ತೆಗೆದ ಕೂಡಲೆ, ಮತ್ತೆ ಗೊಳ್ಳನೆ ಕೇಕೆ ಇಮ್ಮಡಿಯಾಯಿತು. ನಾನು ಹಿಂದಕ್ಕೆ, ಕತ್ತು ಚಾಚಿ ರಾಮಚಂದ್ರನ ಕಡೆ ತಿರುಗಿ ನೋಡಿದೆ. ಅವನು ತನ್ನ ತಲೆಯ ಮೇಲೆ ಜುಟ್ಟು ನಿಗರಿಸುವ ಸನ್ನೆ ಮಾಡಿದ, ಅಡ್ಡ ಗಂಧದ ಸನ್ನೆ ಮಾಡಿದ. ನನಗೆ ಹೊಳೆಯಿತು. ಕುಂಬಳಕಾಯ ತಲೆಯ ಮೇಲೆ ನೆಟ್ಟನೆ ನಿಂತಿರುವ ನಿಡು ತೊಟ್ಟನ್ನು ಹೋಲುವ ನನ್ನ ಬೋಡ ತಲೆಯ ಮೇಲಣ ನಿಮಿರಿ ನಿಂತಿದ್ದ ಪಿಳ್ಳಜುಟ್ಟು ಒಂದು ಕಡೆ, ಹಣೆಯ ಮೇಲೆ ವಿರಾಜಿಸುತ್ತಿದ್ದ ಮಹಾ ಗಂಧಾಕ್ಷತೆ ಒಂದು ಕಡೆ—ಇವು ಉಕ್ಕಿದ ನಗೆಗಡಲಿಗೆ ಕಾರಣ ಎಂದು ತೋರಿತು. ಆಗ ನಾನು ಏನು ತಾನೆ ಮಾಡಲಿ? ಯಾರು ಏನು ಬೇಕಾದರೂ ಮಾಡಲಿ ಜನ ನಕ್ಕು ನಕ್ಕು ಚಾವಣಿಯೇ ತಲೆಯ ಮೇಲೆ ಕಳಚಿ ಬೀಳಲಿ—ನನ್ನ ಗಂಧಾಕ್ಷತೆಯನ್ನು ಖಂಡಿತ ನಾನು ಅಳಿಸಿಕೊಳ್ಳುವುದಿಲ್ಲವೆಂದು ಶಪಥ ಮಾಡಿಕೊಂಡೆ; ಗಟ್ಟಿ ಮನಸ್ಸುಮಾಡಿ

ಸುಮ್ಮನೆ ಕುಳಿತೆ. ಮತ್ತೆ ನಗೆ ಜೋರಾಯಿತು—ಹಿಂದೆ, ಮುಂದೆ. ಜುಟ್ಟನ್ನಾದರೂ ಮುಚ್ಚೋಣವೆಂದು ಹ್ಯಾಟು ಹಾಕಿಕೊಂಡೆ. ಮತ್ತೆ ಮಹಾ ತರಂಗ, ನಗೆಗಡಲಿನದು! ಅಯ್ಯೋ, ರಾಮಚಂದ್ರಾ! ಎಂದುಕೊಂಡೆ ಮನಸ್ಸಿನಲ್ಲಿ. ಭಾವಮೈದುನ ರಾಮಚಂದ್ರ, 'ಜುಟ್ಟು ಪ್ರದರ್ಶನವಾದರೂ ಚಿಂತೆಯಿಲ್ಲ; ಹ್ಯಾಟು ಹಾಕಬೇಡ' ಎಂದು ಮೆಲ್ಲನೆ ಉಸುರಿದ. ಮತ್ತೆ ಹ್ಯಾಟು ತೆಗೆದುಕೊಂಡು ತೊಡೆಯಮೇಲಿಟ್ಟುಕೊಂಡೆ.

"ಅಷ್ಟು ಹೊತ್ತಿಗೆ ನನ್ನ ಮುಖದಿಂದ ಧಾರಾಕಾರವಾಗಿ ಬೆವರು ಸುರಿಯುತ್ತಿತ್ತು. ಆ ಪೇಚಿನಲ್ಲಿ ಸಿಕ್ಕುಬಿದ್ದ ಯಾರಿಗೆ ತಾನೆ ಬೆವರು ಸುರಿಯುವುದಿಲ್ಲ?

"ಒರಸಿಕೊಳ್ಳೋಣವೆಂದರೆ ಕೈಚೌಕವಿಲ್ಲ. ವಾಸ್ತವವಾಗಿ, ನಾನು ಕೈಚೌಕವನ್ನು ಇಟ್ಟಿರಲಿಲ್ಲ. ಅದರ ಆವಶ್ಯಕತೆಯೇ ಕಂಡುಬಂದಿರಲಿಲ್ಲ ನನಗೆ. ರಾಮಚಂದ್ರನನ್ನು ಕೇಳಿ ಅವನ ಚೌಕ ತೆಗೆದುಕೊಂಡು ಮುಖವನ್ನೆಲ್ಲ ಒರಸಿಕೊಂಡೆ; ಆಗ, ಎಡ ಕೆನ್ನೆ ನೊಂದಾಗ, ಅದರ ಮೇಲೆ ದೊಡ್ಡ ಮೊಡವೆ ಎದ್ದು ಒಡೆದು, ಅದರ ಮೇಲೆ 'ಪ್ಲ್ಯಾಸ್ಟ್ರ' ಹಾಕಿಕೊಂಡದ್ದು ಅರಿವಾಯಿತು. ಸುತ್ತಮುತ್ತ ಕುಳಿತಿದ್ದವರು ನನ್ನ ದಿವ್ಯ ಸುಂದರ ವಿಗ್ರಹ ನೋಡಿ ನಕ್ಕಿದ್ದರಲ್ಲಿ ಆಶ್ಚರ್ಯವಿಲ್ಲವೆನಿಸಿತು ನನಗೆ. ನನ್ನ ಮೂಕ ಸಂಕಟವನ್ನು ನಾನೇ ಅನುಭವಿಸಿಕೊಳ್ಳುತ್ತ ಮೌನವಾಗಿ ಕುಳಿತಿದ್ದೆ.

"ಆಗ ರಾಮಚಂದ್ರ ಮತ್ತೆ ನನ್ನ ಬೆನ್ನು ತಿವಿದ, ಹಿಂದೆ ನೋಡುವಂತೆ ಸನ್ನೆ ಮಾಡಿದ. ಹಿಂದಿರುಗಿ ನೋಡಿದೆ. ಕೆಂಪು ಸಿಪಾಯಿಯೊಬ್ಬನು ಸಣ್ಣ ಕನ್ನಡಿಯೊಂದನ್ನು ಹಿಡಿದುಕೊಂಡು ಕೆಂಪು ಮೀಸೆ 'ಟ್ರಿಂ' ಮಾಡಿ (ಸಮರಿ) ಕೊಳ್ಳುತ್ತಿದ್ದ! ನನಗೆ ತುಸ ನಗೆ ಬಂದಿತು. ಇವನನ್ನು ನೋಡಿಯೇ ಎಲ್ಲರೂ ನಕ್ಕಿರಬೇಕೆಂದು ಸ್ವಲ್ಪ ಸಮಾಧಾನವಾಯಿತು. ಆದರೆ, ಎಲ್ಲರೂ ಗಟ್ಟಿಯಾಗಿ ನಕ್ಕಾಗ ಮಾತ್ರ ನನ್ನ ಗಮನ ನನ್ನ ಜುಟ್ಟಿನ ಕಡೆಗೆ ಹೋಗುತ್ತಿತ್ತು, ಆಗ ಜುಟ್ಟು ಮುಟ್ಟಿನೋಡಿಕೊಳ್ಳುತ್ತಿದ್ದೆ.

"ಹೀಗೆ ಪೇಚಾಟಕ್ಕೆ ಸಿಕ್ಕಿದ ಮನಸ್ಸು ಬಳಲಿಹೋಗಿತ್ತು. ದೀಪ ಆರಿ ಚಿತ್ರ ಮೊದಲಾದಾಗ ಮನಸ್ಸು ಎಷ್ಟೋ ಹಗುರವಾಯಿತು.

"ಇದ್ದಕ್ಕಿದ್ದಂತೆಯೇ ತರುಣಿಯ ಸಾಮೀಪ್ಯದ ಅರಿವಾಯಿತು. ಹೌದು, ನಾನು ಒಪ್ಪಿಕೊಂಡುಬಿಡುತ್ತೇನೆ. ಅದು ಏನು ಕಾರಣವೋ ನಾನು ಹೇಳಲಾರೆ. ನನ್ನ ಮನಸ್ಸಿನ 'ಮಡಿ' ಭಾವನೆ, ನನ್ನ ಇರವು ಎಲ್ಲವನ್ನೂ ಮರೆತು, ಅವಳ ಸಾನ್ನಿಧ್ಯವೊಂದರ ಸವಿಯನ್ನೇ ಸವಿಯತೊಡಗಿತು ನನ್ನ ಮನಸ್ಸು. ಅಷ್ಟೊಂದು ಬಳಲಿದ ಮನಸ್ಸಿಗೆ ಆ ತೃಪ್ತಿ—ನಿರ್ದುಷ್ಟ ತೃಪ್ತಿಯಾದರೂ ಬೇಡವೆ? ನಾನು ಪಡುತ್ತಿದ್ದುದು, ಅವಳ ಬರಿಯ ಸಾಮೀಪ್ಯದ ಅನುಭೋಗ ಮಾತ್ರ. ಅವಳ ಉಡುಪು ಕೂಡ ನನಗೆ ಸೋಕಿರಲಿಲ್ಲ. ನಾನೇ ಹಾಗೇ ಮುದುರಿಕೊಂಡು ಕುಳಿತಿದ್ದೆ.

"ಚಿತ್ರ ಮುಂದಕ್ಕೆ ಸಾಗಿತು, ನನಗೆ ನಿಜಕ್ಕೂ ಚಿತ್ರದ ಮೇಲೆ ಗಮನವಿರಲಿಲ್ಲ. ಅದು ನನಗೆ ಹಿಡಿಸಲೂ ಇಲ್ಲ, ನೋಟಕರು ಮಾತ್ರ ತಲ್ಲೀನರಾಗಿ ನೋಡುತ್ತಿದ್ದರು. ವಿರಾಮವೂ ಬಂದಿತು, ವಿರಾಮಕಾಲದಲ್ಲಿ ಬೆಳಕು ಹೊತ್ತಿದ್ದಾಗ ತರುಣಿಯ ಮುಖದರ್ಶನ ಮಾಡಬೇಕೆಂದು ಮನಸ್ಸಿನ ಆಸೆ. ಆದರೆ ಏನೋ ಸಂಕೋಚ. ಬಿಳಿಯ ತೆರೆಯನ್ನೇ ನೋಡುತ್ತ, ಅದರ ಮೇಲೆ ನನ್ನ ಕಲ್ಪನಾ ಚಿತ್ರಗಳು ಮೂಡಿ ಮಾಯವಾಗುತ್ತಿದ್ದುದನ್ನೇ ಅನುಭವಿಸುತ್ತ ಆನಂದಿಸುತ್ತಿದ್ದೆ. ವಿರಾಮ ಮುಗಿಯಿತು, ಚಿತ್ರ ಮೊದಲಾಯಿತು. ಆದರೆ ಆ ಚಿತ್ರ ನನಗೆ ಬೇಕಿರಲಿಲ್ಲ.

"ಬಹಳ ಹೊತ್ತು ಕಳೆಯಿತು. ನನ್ನ ಬಲಗೈಯನ್ನು ಮತ್ತೆ ಬೆಂಚಿನ ಒರಗುಬೆನ್ನಿನ ಹಿಂದಕ್ಕೆ ಇಳಿಯಬಿಟ್ಟುಕೊಂಡು, ಚಿತ್ರ ನೋಡದೆ ಕಣ್ಣು ಮುಚ್ಚಿಕೊಂಡು ಕಲ್ಪನಾ ಚಿತ್ರವಿಹಾರದಲ್ಲಿ ತೊಡಗಿದ್ದೆ. ಆಗ, ಇದ್ದಕ್ಕಿದ್ದಂತೆ, ಇಳಿಯಬಿಟ್ಟಿದ್ದ ನನ್ನ ಮುಂಗೈಗೆ ಸುಖ ಸಂಸ್ಪರ್ಶನದ ಸೂಕ್ಷ್ಮತಮ ಸಂವೇದನೆಯಾಯಿತು. ಆ ಸ್ಪರ್ಶಸುಖ ತುಸ ಹೊತ್ತು ನಡೆಯಿತು. ತರುವಾಯ ಮೃದು ಹಸ್ತವೊಂದು ನನ್ನ ಹಸ್ತವನ್ನು ಹಿಡಿದುಕೊಂಡ ಹಾಗಾಯಿತು: ಯಾರ ಸಾಮೀಪ್ಯದ ಸುಖದಲ್ಲೇ ತೃಪ್ತನಾಗಿದ್ದೆನೋ ಆ ಸುಂದರ ವ್ಯಕ್ತಿಯ ಕೋಮಲ ಹಸ್ತ! ಮುಂಚಾಚಿದ ಪ್ರೇಮಹಸ್ತವನ್ನು ಯಾಗು ತಾನೇ ನಿರಾಕರಿಸುತ್ತಾರೆ? ಕೈಹಿಡಿದ ಹೆಂಡತಿಯನ್ನು ಕ್ಷಣ ಕಾಲ ಮರೆತು ನನ್ನೆಡೆಗೆ ನೀಡಿ ಬಂದ ಕೈಯನ್ನು ಹಿಡಿದುಕೊಂಡೆ, ಬಲವಾಗಿ ಹಿಡಿದುಕೊಂಡೆ.

ಅಹಾ! ಏನು ಕೋಮಲ ಹಸ್ತ! ನನ್ನ ಪ್ರೀತಿಯ ಹೆಂಡತಿಯನ್ನು ಮರೆತೆನೆಂದುಕೊಂಡರೂ, ಆ ಹಸ್ತವನ್ನು, ಆ ಮೃದು ಹಸ್ತವನ್ನು ಅಮುಕುತ್ತ, ಅಮುಕುತ್ತ ನನ್ನ ಹೆಂಡತಿಯ ನೆನಪೇ ಆಗುತ್ತಿತ್ತು. ಏಕೆಂದರೆ ಆ ಹಸ್ತದ ಗಾತ್ರ ನನ್ನ ಹೆಂಡತಿಯ ಹಸ್ತದ ಗಾತ್ರದಷ್ಟೇ ಇರಬೇಕೆಂದು ತೋರಿತು. ಬಲಾತ್ಕಾರದಿಂದ ನನ್ನ ಹೆಂಡತಿಯನ್ನು ಮರೆತೆ—ಭಿನ್ನ ಹಸ್ತದ ಅರಿವೇ ಇರಲೆಂದು. ಈ ಹಸ್ತಸಂಗ್ರಹಣ ಎಷ್ಟು ಹೊತ್ತು ನಡೆಯಿತೋ, ಎಷ್ಟು ಹೊತ್ತನ್ನು ಅದರ ಸುಖದಲ್ಲಿ ನಾನು ಕಳೆದೆನೋ, ನಾನರಿಯೆ. ಯಾರೋ ಬಂದು ಗಟ್ಟಿಯಾಗಿ 'ಏಳಿ, ಚಿತ್ರ ಮುಗಿಯಿತು' ಎಂದು ಹರುಕು ಮುರುಕು ಇಂಗ್ಲಿಷಿನಲ್ಲಿ ಹೇಳಿದಾಗ ಎಚ್ಚರವಾಯಿತು; ರೇಗಿತು, ರಾಮಚಂದ್ರ ನನ್ನನ್ನು ಹೀಗೆ ಬಿಟ್ಟು ಹೊರಟುಹೋಗಬಹುದೇ ಎಂದು; ನಿದ್ದೆ ಬಂದಿದ್ದ ಕಣ್ಣನ್ನು ಉಜ್ಜಿಕೊಳ್ಳೋಣವೆಂದು ಪ್ರಯತ್ನಿಸಿದರೆ, ನನ್ನ ಕೈ ಇನ್ನೂ ಪರಹಸ್ತವಶವಾಗಿದೆ; ಪಕ್ಕಕ್ಕೆ ತಿರುಗಿನೋಡಿದೆ; ತರುಣಿ ಇರಲಿಲ್ಲ. ನನ್ನ ಹಸ್ತವನ್ನು ರಾಮಚಂದ್ರ ಹಿಡಿದುಕೊಂಡಿದ್ದಾನೆ, ಅವನ ಹಸ್ತವನ್ನು ನಾನು ಹಿಡಿದುಕೊಂಡಿದ್ದೇನೆ! 'ಇದೇನು ಭಾವ! ಪಿಕ್ಚರ್ ಮುಗಿದುಹೋಯಿತೆ! ತುಂಬಾ ಚೆನ್ನಾಗಿತ್ತು! ಹಾಗೇ ನಿದ್ರೆ ಬಂದುಬಿಟ್ಟಿತು' ಎಂದ ರಾಮಚಂದ್ರ ಕಕ್ಕಾಬಿಕ್ಕಿಯಾಗಿ. 'ಕೈಬಿಡು, ಇದೇನು ಇಷ್ಟು ಬಲವಾಗಿ ಹಿಡಿದುಕೊಂಡು ಬಿಟ್ಟಿದ್ದಿ!' ಎಂದೆ ನಾನು. 'ನಿನ್ನ ಕೈಯೆ ನಾನು ಇಷ್ಟು ಹೊತ್ತೂ ಹಿಡಿದು ಕೊಂಡು ಇದ್ದದ್ದು!' ಎಂದು ಆಶ್ಚರ್ಯದ ನಗೆ ಬೀರಿದ ರಾಮಚಂದ್ರ. 'ನಿನ್ನ ಕೈ ನನ್ನನ್ನು ಮೋಸಪಡಿಸಿದ್ದರಲ್ಲಿ ಆಶ್ಚರ್ಯವಿಲ್ಲ; ಆದರೆ ನನ್ನ ಕೈ ನಿನ್ನನ್ನು ಹೇಗೆ ಮೋಸಪಡಿಸಿತೋ ಆಶ್ಚರ್ಯ!' ಎಂದೆ. 'ಅದಿರಲಿ, ಎಲ್ಲಕ್ಕಿಂತ ಆಶ್ಚರ್ಯ, ಅದ್ಭುತ ನಡೆದುಹೋಗಿದೆ ಭಾವಯ್ಯ!' ಎಂದು ಉದ್ಗಾರ ತೆಗೆದ ರಾಮಚಂದ್ರ. 'ಏನು!' ಎಂದು ಬೆರಗಾಗಿ ಕೇಳಿದೆ ನಾನು. 'ನಿನ್ನ ಜುಟ್ಟೆಲ್ಲಿ?' ಎಂದ ಅವನು. ತಲೆ ಮುಟ್ಟಿ ನೋಡಿಕೊಂಡೆ: ನಿಶ್ಶೇಷವಾಗಿತ್ತು! ಕೆಂಚು ಮೀಸೆ ಕತ್ತರಿಸಿಕೊಳ್ಳುತ್ತಿದ್ದ ಸಿಪಾಯಿಯ ನೆನಪಾಯಿತು; ರೇಗಿತು! ಏನು ಮಾಡುವುದು? ನಮ್ಮ ಈ ಪರಸ್ಪರ ವಿಡಂಬನ ದೃಶ್ಯವನ್ನು ನೋಡುತ್ತ ನಗುತ್ತ ನಿಂತಿದ್ದಾನೆ ಮಂದಿರದ ದ್ವಾರಪಾಲಕ! ಅವನೆದುರು

ಸಾರೀ ಪರಿಹಾಸ ಎಂದು ಭಾವ–ಮೈದುನರು ನಾವು ಒಬ್ಬರ ಕೈ ಒಬ್ಬರು ಹಿಡಿದುಕೊಂಡು ಹೊರಹೊರಟೆವು.

"'ಅಲ್ಲ, ಎಷ್ಟು ಸಾಹಸ ಆ ಸಿಪಾಯಿಯದು, ನನ್ನ ಜುಟ್ಟು ಕತ್ತರಿಸಿದ್ದಾನಲ್ಲ!' ಎಂದು ಸಿಡಿಸಿಡಿಗುಟ್ಟಿದೆ ಹೊರಕ್ಕೆ ಬಂದಾಗ.

"ನಮ್ಮ ನಾಟಕದ ಭರಾಟೆಯಲ್ಲಿ ಬಸ್ಸು ಸಿಕ್ಕುವ ಹೊತ್ತೂ ಮೀರಿ ಹೋಗಿತ್ತು. ನಡೆದುಕೊಂಡೇ ಹಿಂದಿರುಗಿದೆವು. ಕಂಟೋನ್ಮೆಂಟಿನಲ್ಲಿ, ಮಲ್ಲೇಶ್ವರದ ೧೮ ನೆಯ ಕ್ರಾಸ್ ರಸ್ತೆಯಲ್ಲಿ! ಕಾಲು ದಾರಿ ಮುಗಿಯುವುದಕ್ಕಿಲ್ಲ, ಹೊಸ ಜೋಡು ಕಾಲು ಕಚ್ಚಿತು. ಅದು ಕಚ್ಚದೆಯೋ ಅದನ್ನೆಳೆದುಕೊಂಡು ನಡೆಯುವುದು ಸಾಕುಸಾಕಾಗಿಹೋಗಿತ್ತು. ಕಚ್ಚಿದ ಮೇಲೆ ಬಿಚ್ಚುವುದೊಂದೇ ಉಳಿದಿದ್ದ ಉಪಾಯ; ಬಿಚ್ಚಿ ಕೈಲಿ ಹಿಡಿದುಕೊಂಡು ನಡೆದೆ.

"'ಎಂತಹ ಹಣೆಯುಬರಹ! ಜುಟ್ಟು ಕಳೆದುಕೊಂಡು, ಜೋಡು ಕೈಲಿ ಹಿಡಿದುಕೊಂಡು, ಹತ್ತು ಘಂಟೆ ರಾತ್ರಿಯಲ್ಲಿ ಹೊಟ್ಟೆಗಿಲ್ಲದೆ ನಾಲ್ಕು ಮೈಲಿ ನಡೆಯುವುದು! ಇದು ಎಲ್ಲಿಯ ಹಣೆಯುಬರಹವೊ ರಾಮಚಂದ್ರ. ಇನ್ನು ಇದೇ ಕಡೆಯ ದಿನ; ನಾನು ಸಿನಿಮಾ ಮಂದಿರಕ್ಕೆ ಕಾಲಿಡುವುದಿಲ್ಲ' ಎಂದು ಅರ್ಧ ಕೋಪದಿಂದ, ಅರ್ಧ ದುಃಖದಿಂದ ಹೇಳಿದೆ ರಾಮಚಂದ್ರನಿಗೆ.

"ರಾಮಚಂದ್ರ, 'ಅದಿರಲಿ, ನಾವಿಬ್ಬರೂ ಎಂತಹ ಬೇಸ್ತು ಬಿದ್ದೆವು' ಎಂದು ಹಸ್ತಪರಿಗ್ರಹಣದ ಪ್ರಕರಣವನ್ನು ನೆನಪಿಗೆ ತಂದು ಹೊಟ್ಟೆ ಹಿಡಿಸಲಾರದಷ್ಟು ನಗತೊಡಗಿದ; ಕೊಟಡಿ ಸೇರುವವರೆಗೂ ಆಗಾಗ್ಗೆ ನಗುತ್ತಲೇ ಇದ್ದ. ಯತ್ನವಿಲ್ಲದೆ ನಾನೂ ಆ ತಿಳಿನಗೆಯಲ್ಲಿ ಬೆರೆಯುತ್ತಿದ್ದೆ. ಹಾಗೆ ನಗದಿದ್ದಿದ್ದರೆ ದಾರಿ ನಡೆಯುವುದೇ ಕಷ್ಟವಾಗುತ್ತಿತ್ತು."

* * * * * *

ಮೇಲಿನ ಕತೆ ಕೇಳಿ 'ಕೆ. ಸಿ.' ಅಂತೂ ತುಂಬ ನಕ್ಕ, ತನಗೆ ಸಂಬಂಧಪಟ್ಟಿದ್ದು ಎಂದು ತಿಳಿಯುವ ಮುನ್ನ.

ಇದರಲ್ಲಿ ನಡೆದ ಸಂಗತಿ ಎಷ್ಟು ಭಾಗ, ಕಟ್ಟಿ ಬೆಳಸಿದ ಕಥೆ ಎಷ್ಟು ಭಾಗ ಎಂಬುದನ್ನು ವಾಚಕರ ಊಹೆಗೆ ಬಿಟ್ಟಿದೆ.

# ಸಿನಿಮಾ ಹುಚ್ಚು

ನಿರ್ಮಲಾದೇವಿ ಆ ವರ್ಷ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದ್ದಳು. ಹುಡುಗಿ ಜಾಣೆ; ಅಲಂಕಾರಪ್ರಿಯೆಯಾದರೂ ಓದಿನಲ್ಲಿ ಮನಸ್ಸಿಟ್ಟಿದ್ದಳು; ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದ್ದಳು; ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲೂ ಮೊದಲ ತರಗತಿಯಲ್ಲಿ ತೇರ್ಗಡೆಯಾಗುವಳೆಂದು ಅವಳ ಗೆಳತಿಯರ ನಂಬಿಕೆ; ಕಡೆಯಪಕ್ಷ ಎರಡನೆಯ ತರಗತಿಯಲ್ಲಾದರೂ ತೇರ್ಗಡೆಯಾಗುವಳೆಂದು ಅವಳ ತಂದೆಯ ನಿರೀಕ್ಷೆ.

ನಿರ್ಮಲೆಯ ತಂದೆ, ನಿವೃತ್ತ ಅಮಲ್ದಾರ್ ನಂಜುಂಡಯ್ಯನವರಿಗೆ ಪರೀಕ್ಷೆಯ ಫಲಿತಾಂಶದ ಬಗ್ಗೆ ಅಷ್ಟೇನೂ ಯೋಚನೆ ಇರಲಿಲ್ಲ; ಅವರಿಗೆ ಇದ್ದ ದೊಡ್ಡ ಯೋಚನೆಯೆಂದರೆ, ಅವಳ ಮದುವೆಯದು. ಮೊದಲೇ ವರ ಸಿಕ್ಕುವುದು ಕಷ್ಟ; ಸಿಕ್ಕಿದ ವರಗಳನ್ನು ನಿರ್ಮಲೆ ಒಪ್ಪುತ್ತಿರಲಿಲ್ಲ. ಅವಳ ಪರೀಕ್ಷೆಯಲ್ಲಿ ಇದುವರೆಗೆ ಯಾವ ವರನೂ ತೇರ್ಗಡೆಯಾಗಿರಲಿಲ್ಲ; ಒಬ್ಬೊಬ್ಬ ವರನಲ್ಲಿ ಒಂದೊಂದು ಹುಳುಕು ಕಾಣುತ್ತಿತ್ತು. ಅವಳಿಗೆ. ಒಬ್ಬನ ಬಣ್ಣ ಕಪ್ಪು; ಇನ್ನೊಬ್ಬನು ತನ್ನಂತೆಯೇ ಬೆಳ್ಳಗಿದ್ದರೂ ಅವನ ಮೂಗು ಗರುಡ ಮೂಗು; ಮತ್ತೊಬ್ಬನು ಎಲ್ಲ ದೃಷ್ಟಿಯಿಂದಲೂ ಸರಿಯಾಗಿದ್ದರೂ ತನ್ನ ಹಾಡಿಕೆಯ ಸವಿಯನ್ನು ಅರಿಯಲಾರದ ಮೂಢ; ಹೀಗೆಯೇ....

ಮುದ್ದಿನಿಂದ ಬೆಳಸಿದ ತಮ್ಮ ಕಿರಿಯ ಮಗಳನ್ನು ಅವಳು ಒಪ್ಪದವನ ಕೊರಳಿಗೆ ಬಿಗಿಯಲು ನಂಜುಂಡಯ್ಯನವರಿಗೆ ಇಷ್ಟವಿರಲಿಲ್ಲ. ಆದರೆ ಅವಳ ವರನಿರಾಕರಣೆಯ ಇಂಗಿತವೇನೆಂಬುದನ್ನು ಅವರು ಇನ್ನೂ ಅರಿತಿರಲಿಲ್ಲ; ಅರಿಯುವ ಪ್ರಯತ್ನವನ್ನೂ ಮಾಡಿರಲಿಲ್ಲ.

ತಾವು ನೋಡಿ ಮೆಚ್ಚಿದ ಚಲನಚಿತ್ರಪಟಗಳನ್ನು ತಮ್ಮ ಹೆಂಡತಿಯೂ ಕಿರಿಯ ಮಗಳೂ ಮೆಚ್ಚಲೆಂದು ಆಶಿಸುತ್ತಿದ್ದ ನಂಜುಂಡಯ್ಯನವರು, ಆಗ ತಾನೆ ಹೈಸ್ಕೂಲಿಗೆ ಕಾಲಿಟ್ಟಿದ್ದ ತಮ್ಮ ಪ್ರಿಯಕುಮಾರಿಯನ್ನು ತಿಂಗಳಿಗೆ ಎರಡುಮೂರು ಸಲ ಸಿನಿಮಾಕ್ಕೆ ಕರೆದುಕೊಂಡು ಹೋಗಲು ತೊಡಗಿದ ಮೇಲೆ, ಮೊದಲಿನಿಂದಲೂ ಅಲಂಕಾರಪ್ರಿಯೆಯಾಗಿದ್ದ ಅವಳ ಅಲಂಕಾರ

ಪ್ರಿಯತೆಯ ರೀತಿ ದಿನದಿನಕ್ಕೆ ಬಣ್ಣ ಬದಲಾಯಿಸುತ್ತಿತ್ತು. ಸಿನಿಮಾ ನಟಿಯರ ವೇಷಭೂಷಣಗಳು ರಂಗುರಚನೆಗಳು ಬದಲಾದಂತೆ ಅವಳ ವೇಷಭೂಷಣ ವಿಧಾನಗಳೂ ಮಾರ್ಪಟ್ಟು ಮೇಲೇರಿದ್ದಲ್ಲದೆ, ನಿರ್ಮಲೆ ಕಾಲೇಜಿಗೆ ಕಾಲಿಡುವ ವೇಳೆಗೆ, ಹೈಸ್ಕೂಲಿನಲ್ಲಿ 'ಗೌರಮ್ಮ'ನಾಗಿದ್ದವಳು ಕಾಲೇಜಿನಲ್ಲಿ 'ನಿರ್ಮಲಾದೇವಿ'ಯಾಗಿ, ಸಿನಿಮಾ ನಟಿಯೊಬ್ಬಳ ಚಿತ್ರಾರ್ಪಿತ ಛಾಯೆ ಜೀವ ತಳೆದು ರಜತಫಲಕದೆಯಿಂದ ಇಳಿದು ಬಂದು ನಡೆದುಹೋಗುತ್ತಿದೆಯೋ ಎನ್ನು ವಂತಾದಳು. ಅವಳ ಜೊತೆಗಾತಿಯರಲ್ಲಿ ಅವಳ ಹಾಗೆ ಅಲಂಕಾರ ಮಾಡಿ ಕೊಳ್ಳುತ್ತಿದ್ದವರು ಯಾರೂ ಇರಲಿಲ್ಲ ; ಆದ್ದರಿಂದ ಅವರಲ್ಲಿ ಇವಳ ಮೇಲೆ ಕೊಂಚ ಅಸೂಯೆ ಇದ್ದರೂ, ಎಲ್ಲರೂ ಇವಳನ್ನು ಮೆಚ್ಚಿಕೊಂಡಿದ್ದರು ; ನಿರ್ಮಲೆಯಲ್ಲಿ ಅಂತಹ ಸೌಜನ್ಯದ ಆಕರ್ಷಕ ಗುಣಗಳಿದ್ದುವು ; ಜೊತೆಗೆ ಒಳ್ಳೆಯ ರೂಪ, ಎಲ್ಲರನ್ನೂ ಮುಗ್ಧಗೊಳಿಸುವ ಕೋಕಿಲಕಂಠ; ಅವಳು ಮಾತಾಡಿದರೆ ಸಂಗೀತ, ಕೈಯಾಡಿಸಿದರೆ ಅಭಿನಯ.

ನಿರ್ಮಲೆಗೆ ಎರಡು ಹುಚ್ಚುಗಳಿದ್ದುವು: ಒಂದು, ತಾನು ಏಕೆ ಸಿನಿಮಾ ನಟಿಯಾಗಬಾರದೆನ್ನುವುದು ; ಇನ್ನೊಂದು, ಸಿನಿಮಾ ಕಥೆಗಳಲ್ಲಿ ನಡೆಯು ವಂತೆ, ತನ್ನ ಬಾಳ ಹಾದಿಯಲ್ಲಿ ಆಕಸ್ಮಿಕವಾಗಿ ಅಡ್ಡಬಂದು ತನ್ನ ಹೃದಯವನ್ನು ಪ್ರಥಮತಃ ಸೆಳೆಯುವ ತರುಣನನ್ನು ಏಕೆ ಮದುವೆಯಾಗ ಬಾರದೆನ್ನುವುದು.

ನಿರ್ಮಲೆಗೆ ಸೊಗಸಾಗಿ ಹಾಡುವುದಕ್ಕೆ ಬರುತ್ತಿತ್ತಲ್ಲ. ಅದರಲ್ಲೂ, 'ಚಿತ್ರಗೀತ'ಗಳನ್ನು ಬಹು ಸೊಗಸಾಗಿ ಹಾಡುತ್ತಿದ್ದಳು. ಒಂದು ಸಲ ಚಿತ್ರ ನೋಡಿದ ಮಾತ್ರದಿಂದ, ಅಲ್ಲಿನ ಹಾಡುಗಳನ್ನು ಒಮ್ಮೆ ಕೇಳಿದ ಮಾತ್ರದಿಂದ, ಅದು ಹೇಗೆ ಅವುಗಳನ್ನು ಅಚ್ಚಳಿಯದಂತೆ ಹಾಡಲು ಅವಳು ಕಲಿತುಬಿಡು ತ್ತಿದ್ದಳೆಂಬುದು ಅವಳ ಗೆಳತಿಯರಿಗೆಲ್ಲ ಪರಿಹಾರವಾಗದ ಸಮಸ್ಯೆಯಾಗಿತ್ತು. ಶಾಲೆಯಲ್ಲಿದ್ದಾಗ, ಮತ್ತೆ ಈಗ ಕಾಲೇಜಿನಲ್ಲಿ, ನಿರ್ಮಲೆಯ 'ಚಿತ್ರಗೀತ' ವಿಲ್ಲದೆ ಯಾವ ಸಮಾರಂಭವೂ ಶೋಭಿಸುತ್ತಿರಲಿಲ್ಲ.

ಸಿನಿಮಾ ನಟಿಯಾಗಬೇಕೆಂಬ ನಿರ್ಮಲೆಯ ಹುಚ್ಚು ಹೆಚ್ಚುಕಾಲ ನೆಲ ಸಿರಲಿಲ್ಲ. ಜೂನಿಯರ್ ಇಂಟರ್ ತರಗತಿಗೆ ಕಾಲಿಟ್ಟಾಗ ಆ ಹುಚ್ಚು ತಲೆಗೆ ಏರಿ, ಸೀನಿಯರ್ ಇಂಟರ್ ತರಗತಿಗೆ ಬರುವವೇಳೆಗೆ ಬಿಟ್ಟುಬಿಟ್ಟಿತ್ತು.

ಒಮ್ಮೆ, ಕನ್ನಡ ದಿನಪತ್ರಿಕೆಯೊಂದರಲ್ಲಿ 'ಸಿನಿಮಾ ನಟನಟಿಯರು ಬೇಕಾಗಿದ್ದಾರೆ' ಎಂಬ ಪ್ರಕಟನೆಯನ್ನೋದಿ, ಅಲ್ಲಿ ಕೊಟ್ಟಿದ್ದ ವಿಳಾಸಕ್ಕೆ ಗೋಪ್ಯವಾಗಿ ತನ್ನ ಫೋಟೋ ಸಮೇತ ಅಪೇಕ್ಷೆ ಪತ್ರ ಬರೆದುಕೊಂಡಿದ್ದಳು. ಆರು ತಿಂಗಳಾದರೂ ಅವಳ ಪತ್ರಕ್ಕೆ ಉತ್ತರ ಬರಲಿಲ್ಲ; ಫೋಟೋ ಕೂಡ ಹಿಂದಕ್ಕೆ ಬರಲಿಲ್ಲ. ಮತ್ತೆ, ಆ ಚಲನಚಿತ್ರ ನಿರ್ಮಾಣ ಸಂಸ್ಥೆಯ ಹೆಸರನ್ನು ಎಲ್ಲಿಯೂ ಕಾಣಲಿಲ್ಲ, ಕೇಳಲಿಲ್ಲ. ಇದರಿಂದ, ಕನ್ನಡ ನಾಡಿನಲ್ಲಿ ಚಲನಚಿತ್ರ ಉದ್ಯಮ ಇನ್ನೂ ಅಂಬೆಗಾಲಿಕ್ಕುತ್ತಿರುವವರೆಗೂ ತನ್ನಂಥ ಸುಶಿಕ್ಷಿತ ತರುಣಿ ಸಿನಿಮಾ ನಟಿಯಾಗಲು ಸಾಧ್ಯವಿಲ್ಲವೆಂಬ ನಿಷ್ಠುರಸತ್ಯವನ್ನು ಅವಳು ಅರಿಯಬೇಕಾಯಿತು. ಅನೇಕ ಮಂದಿ ಅಭಿನಯಕುಶಲರಾದ ಕನ್ನಡ ತರುಣರೇ ಅವಕಾಶವಿಲ್ಲದೆ ಕೊಳೆಯುತ್ತಿದ್ದಾರೆ; ಅನೇಕರು ತಮ್ಮ ನಾಡಿನಲ್ಲಿ ಅವಕಾಶವಿಲ್ಲದ್ದಕ್ಕಾಗಿ ಹೊರನಾಡುಗಳಿಗೆ ಹೋಗಿ ಹಿಂದಿ, ತಮಿಳು, ತೆಲುಗು ಚಿತ್ರಗಳಲ್ಲಿ ಹೆಸರುಮಾಡಿ ಆ ನಾಡುನುಡಿಗಳಿಗೆ ಹೆಸರು ತರುತ್ತಿದ್ದಾರೆ; ಇನ್ನು ತಾನೇಕೆ ಕೊರಗಬೇಕು ?–ಎಂದು ಅವಳು ಸಮಾಧಾನ ತಂದುಕೊಂಡಿದ್ದಳು. ಆದರೂ ನಿರಾಶೆ ಒಳಗೆ ಕುದಿಯುತ್ತಲೇ ಇತ್ತು.

ಕಾಲೇಜಿನ ಕರ್ನಾಟಕ ಸಂಘದಲ್ಲಿ ಏನಾದರೊಂದು ಭಾಷಣ ಮಾಡಬೇಕೆಂದು ಸಂಘದ ಕಾರ್ಯದರ್ಶಿ–ಗೆಳತಿ ಮಾಲತಿ--ಪೀಡಿಸಲು, 'ಕನ್ನಡ ನಾಡಿನ ಚಲನಚಿತ್ರೋದ್ಯಮ' ಎಂಬ ವಿಷಯ ಕುರಿತು ಭಾಷಣಮಾಡ ಒಪ್ಪಿ, ತನ್ನ ನಿರಾಶಾಭಾವವೆಲ್ಲವನ್ನೂ ಅಂದು ತೋಡಿಕೊಂಡಳು. ಅವಳ ಭಾಷಣದಲ್ಲಿ ಅಂಕಿ ಅಂಶಗಳ ಕೊರತೆಯಿದ್ದರೂ, ಅದರ ಧಾಟಿ, ಓಜಸ್ಸಿನಿಂದ ಕೂಡಿದ ಅವಳ ಮಾತುಗಾರಿಕೆ, ನಟನವೃತ್ತಿಯ ಘನತೆಯನ್ನು ಕುರಿತು ಹೇಳಿದ ಅವಳ ಆದರ್ಶಮಯ ಅಭಿಪ್ರಾಯಗಳು–ಇವೆಲ್ಲ ಸಭಿಕರನ್ನು ಮುಗ್ಧಗೊಳಿಸಿದುವು; ಅವಕಾಶ ದೊರೆತರೆ, ನಿರ್ಮಲಾದೇವಿ ಕನ್ನಡನಾಡಿಗೆ ಹೆಸರು ತರತಕ್ಕ ನಟಿಯಾಗಬಲ್ಲಳೆಂಬುದನ್ನು ಅವಳ ಅಭಿನಯಪೂರ್ವಕವಾದ ಮಾತುಗಾರಿಕೆಯಿಂದ ಸಭಾಸದರು ಮನಗಂಡರು. ಆದರೆ ಅಂದಿನ ಭಾಷಣದೊಂದಿಗೇ, ನಟಿಯಾಗಬೇಕೆಂಬ ನಿರ್ಮಲೆಯ ಹುಚ್ಚು ಹಾರಿಹೋಯಿತು. ಪ್ರತಿಕೂಲ ಸನ್ನಿವೇಶವೆಂಬ ಬಂಜರುಭೂಮಿಯಲ್ಲಿ ಬಿದ್ದು, ಹೊಯ್ನೀರಿಲ್ಲದೆ ಅವಳ ಆಸೆಯ ಬಿತ್ತು ಕಮರಿಹೋಯಿತು.

ಈ ಸಂದರ್ಭ, ನಟಿಯಾಗಬೇಕೆಂದು ಬಯಸಿ, ಆ ಬಯಕೆಯನ್ನು ತ್ಯಜಿಸಿದ ಈ ಸಂದರ್ಭ, ಅವಳ ಬಾಳಿನಲ್ಲಿ ಯಾವ ದಿಕ್ಕಿನಿಂದಲೋ ನರುಗಂಪನ್ನು ಹೊತ್ತು ತಂದ ಗಾಳಿಯಂತೆ ಬೀಸಿಕೊಂಡು ಬಂದು ಕ್ಷಣಕಾಲ ಮನಸ್ಸನ್ನು ತಣಿಸಿ, ಕುಣಿಸಿ, ಕಡೆಗೆ ದಣಿಸಿ, ಹಾಗೆಯೇ ಬೀಸಿಕೊಂಡು ಹೊರಟುಹೋಯಿತು.

* * * * *

ಪರೀಕ್ಷೆಯ ಮುನ್ನ ನಗರಭವನದಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗಾಗಿ ಒಂದು ಸಂಗೀತ ಸ್ಪರ್ಧೆ ಏರ್ಪಾಟಾಗಿತ್ತು. ಅದರಲ್ಲಿ, 'ಚಿತ್ರಗೀತ ಗಾಯನ' ಒಂದು ಪ್ರತ್ಯೇಕ ವಿಭಾಗ. ಉಳಿದ ಎಲ್ಲ ವಿಭಾಗಗಳಲ್ಲೂ ವಿದ್ಯಾರ್ಥಿಗಳಿಗೇ ಬೇರೆ, ವಿದ್ಯಾರ್ಥಿನಿಯರಿಗೇ ಬೇರೆ, ಸ್ಪರ್ಧೆ, ಬಹುಮಾನಗಳಿದ್ದು ಈ ವಿಭಾಗದಲ್ಲಿ ಮಾತ್ರ ಇಬ್ಬರಿಗೂ ಕೂಡಿಯೇ ಸ್ಪರ್ಧೆ ಬಹುಮಾನವಿತ್ತು. ಇದರ ಉದ್ದೇಶ ಅನೇಕರಿಗೆ ತಿಳಿಯದು. ಈ ಸ್ಪರ್ಧೆಯನ್ನು ಏರ್ಪಾಡು ಮಾಡಿದ್ದವರು ಕಾಲೇಜಿನ ವಿದ್ಯಾರ್ಥಿ ಸಂಘದವರು. ಅವರು ನಿರ್ಮಲಾದೇವಿಯ ಪ್ರೌಢಿಮೆಯನ್ನು ಕೇಳಿದ್ದರು; ಆದರೂ, ತಮ್ಮ ಕಾಲೇಜಿನ ಸುಂದರವರ್ಗಿಗೆ ಅವಳು ಸರಿಬರಲಾರಳೆಂದು ಅವರ ನಂಬಿಕೆ. ಸಾರ್ವಜನಿಕ ಸ್ಪರ್ಧೆಯಲ್ಲಿ ಇದನ್ನು ಇತ್ಯರ್ಥಪಡಿಸಿ, ಹಾಡುವುದರಲ್ಲಿ ತರುಣರು ತರುಣಿಯರಿಗೇನು ಕಡಮೆಯಲ್ಲ ಎಂಬುದನ್ನು ತೋರಿಸಬೇಕೆಂದು ಅವರ ಉದ್ದೇಶ.

ಸ್ಪರ್ಧೆಯ ದಿನ ಬಂತು. 'ಚಿತ್ರಗೀತ' ಸ್ಪರ್ಧೆ ಕಡೆಯಲ್ಲಿತ್ತು. ನಿರ್ಮಲೆಯೂ ಸ್ಪರ್ಧಿಯಾಗಿ ಹೋಗಿದ್ದಳೆಂದು ಬೇರೆ ಹೇಳಲೇಬೇಕಾಗಿಲ್ಲ; ಅವಳ ತಂದೆತಾಯಂದಿರೂ ಮಗಳ ಗಾಯನ ಕೌಶಲವನ್ನು ಮೆಚ್ಚಲು ಬಂದಿದ್ದರು. ಮೊದಲಿಗೇ ನಿರ್ಮಲಾದೇವಿಯ ಹೆಸರು ಬಂತು. ಅವಳಿಗೆ ಗಾಬರಿಯಾಯಿತು. ಧೈರ್ಯದಿಂದ ಹೋಗಿ ವೇದಿಕೆಯ ಮೇಲೆ ನಿಂತಳು. ಅವಳನ್ನು ನೋಡಿದ ಕೂಡಲೆ, ಅಲ್ಲೋಲಕಲ್ಲೋಲವಾಗಿದ್ದ ಸಭಾಸಾಗರ ಸ್ತಬ್ಧವಾಯಿತು, ಶಾಂತವಾಯಿತು. ನಿರ್ಮಲೆ, ತನಗೆ ಇಷ್ಟ ಬಂದ ಒಂದು ಹಾಡನ್ನು ಮೊದಲು ಹೇಳಿದಳು; ಆಮೇಲೆ ಪರೀಕ್ಷಕರು ಕೋರಿದ ಒಂದು ಹಾಡನ್ನು ಹೇಳಿದಳು. ಇವಳಾದ ತರುವಾಯ ಅನೇಕ ಸ್ಪರ್ಧಿಗಳು ಬಂದು

ಹೋದರು. ಅವರ ಹಾಡಿಕೆಯೆಲ್ಲ ಹೊಟ್ಟೆ ತುಂಬ ಕೀರು ಕುಡಿದ ಮೇಲೆ ಉಪ್ಪು ನೀರು ಕುಡಿದಂತಾಗಿತ್ತು. ಕಡೆಯಲ್ಲಿ ಸುಂದರಂ! ಅವನ ಹೆಸರು ಕೇಳಿದ ಕೂಡಲೆ ವಿದ್ಯಾರ್ಥಿ ಸಮೂಹ ಚಪ್ಪಾಳೆಗಳ ಸುರಿಮಳೆಯನ್ನೆ ಸುರಿಸಿಬಿಟ್ಟಿತು; ಅದು ಅಡಗಲು ಐದು ನಿಮಿಷವಾಯಿತು. ಸುಂದರಂ ತಗ್ಗುಸ್ಥಾಯಿಯಲ್ಲಿ ಸ್ವರವೆತ್ತಿದ ಕೂಡಲೆ ಸಭೆ ಮತ್ತೆ ಸ್ತಬ್ಧವಾಯಿತು. ಅವನು ಸ್ಪರ್ಧೆಯ ನಿಯಮದ ಮೇರೆಗೆ ಹಾಡಬೇಕಾದ ಹಾಡುಗಳನ್ನು ಹಾಡಿ ಮುಗಿಸಿದ. ಪರೀಕ್ಷಕರು ಬಹುಮಾನದ ತೀರ್ಮಾನ ಕೊಡಲು ಅಂಕಗಣನೆ ಮಾಡುವುದಕ್ಕಾಗಿ ಎದ್ದು ಹೋದರು. ಆಗ ಸುಂದರಂ ಹಾಡಬೇಕೆಂದು ಸಭೆಗೆ ಸಭೆಯೇ ಕೂಗಿತು. ಸುಂದರಂ ಒಂದೆರಡು ಹಾಡು ಹೇಳಿದ. ಬಳಿಕ ನಿರ್ಮಲಾದೇವಿ ಹಾಡಬೇಕೆಂಬ ಕೂಗೆದ್ದಿತು. ನಿರ್ಮಲೆ ಗೆಳತಿಯರ ಮುಖ ನೋಡಿದಳು; ಅವರು ಪ್ರೋತ್ಸಾಹ ಕೊಡಲು, ಎದ್ದುಹೋದಳು. ಸುಂದರಂ ಇನ್ನೂ ವೇದಿಕೆಯ ಮೇಲೆಯೇ ನಿಂತಿದ್ದ; ಅದನ್ನು ಕಂಡು, ನಿರ್ಮಲೆಗೆ ಏನು ಹೊಳೆಯಿತೋ ಏನೋ, ಒಂದು ಸಂವಾದ ಗೀತೆ ಮೊದಲು ಮಾಡಿದಳು. ಸುಂದರಂ ಸುಳಿವು ಹಿಡಿದು, ಗೀತೆಯ ಹಾಡಿಕೆಯಲ್ಲಿ ತಾನೂ ಸೇರಿಕೊಂಡ. ಹೀಗೆಯೇ ಐದಾರು ಸಂವಾದ ಗೀತೆಗಳ ಹಾಡಿಕೆ ಸಾಗಿತು. ನಿರ್ಮಲೆ ಹೆಚ್ಚೋ, ಸುಂದರಂ ಹೆಚ್ಚೋ—ಯಾರೂ ಹೇಳಲಾಗುವಂತಿರಲಿಲ್ಲ. ಆ ಹೊತ್ತಿಗೆ ಪರೀಕ್ಷಕರು ಒಂದೊಂದಾಗಿ ಫಲಿತಾಂಶ ಹೇಳಿಕೊಂಡು ಬಂದರು. ಚಿತ್ರಗೀತ ಗಾಯನದಲ್ಲಿ ಮೊದಲ ಬಹುಮಾನ ನಿರ್ಮಲೆಗೂ ಸುಂದರಂಗೂ ಸಮವಾಗಿ ಹಂಚಿಕೆಯಾಗಿತ್ತು. ತೀರ್ಪು ಎಲ್ಲರಿಗೂ ತೃಪ್ತಿಕರವಾಗಿತ್ತು.

ಅಂದಿನಿಂದ ನಿರ್ಮಲೆಯ ಮನಸ್ಸು ಸುಂದರಂನಲ್ಲಿ ಕೀಲಿಸಿಹೋಯಿತು. ಅವಳನ್ನು ಹಾಗೆ ಆಕರ್ಷಿಸಿದ್ದು ಅವನ ಕಂಠವೋ ರೂಪೋ ಹೇಳುವುದು ಕಷ್ಟ. ಎರಡೂ ಕೂಡಿಯೇ ಇರಬೇಕು. ಸುಂದರಂ ಹೆಸರಿನಲ್ಲಿ ಮಾತ್ರವಲ್ಲದೆ ನಿಜವಾಗಿಯೂ ಸುಂದರನೇ ಆಗಿದ್ದ. ಸಿನಿಮಾದಲ್ಲಿ ನಡೆಯುವಂತೆ, ತನ್ನ ಮನಸ್ಸೊಪ್ಪಿದವನನ್ನೇ ತಾನು ಮದುವೆಯಾಗಬೇಕೆಂಬ ಅವಳ ಹಳೆಯ ಬಯಕೆ ಈಗ ಮತ್ತೆ ಪ್ರಬಲವಾಗಿ ತಲೆ ಎತ್ತಿತು. ಅವಳು ಈವರೆಗೆ

ತನ್ನ ಈ ಬಯಕೆಯನ್ನು ಸ್ಪಷ್ಟವಾಗಿ ತಂದೆಗೆ ತಿಳಿಸಿರಲಿಲ್ಲ. ಈಗ ತಾನು ಸುಂದರಂನನ್ನು ಮೊದಲ ನೋಟಕ್ಕೆ ಮೆಚ್ಚಿಕೊಂಡದ್ದಾಗಿದೆ, ಅಥವಾ ಒಲಿದದ್ದೇ ಆಗಿದೆ. ಇನ್ನು ಅವನನ್ನೇ ತಾನು ಮದುವೆಯಾಗುವುದಾಗಿ ತನ್ನ ತಂದೆಗೆ ತಿಳಿಸಿಬಿಡುವುದೊಂದೇ ಉಳಿದಿರುವ ಕೆಲಸ. ಕಾಲ ವಿಳಂಬ ಮಾಡಿದರೆ ಅವನು ತನ್ನ ಪಾಲಿಗೆ ಇಲ್ಲದೆ ಹೋಗಬಹುದು. ಜಾಗ್ರತೆ ಮಾಡಬೇಕು—ಎಂದು ನಿರ್ಧರಿಸಿದಳು ಹುಚ್ಚು ಹುಡುಗಿ.

ಸ್ಪರ್ಧೆಯ ದಿನ ಸಮಾರಂಭ ಮುಗಿದ ಕೂಡಲೆ, ಸುಂದರಂ ಬಂದು ನಿರ್ಮಲೆಯನ್ನು ಅಭಿನಂದಿಸಿದ; ಇವಳೂ ಅವನನ್ನು ಅಭಿನಂದಿಸಿದಳು. ಅಲ್ಲದೆ, ಪರೀಕ್ಷೆ ಮುಗಿದ ಕೂಡಲೆ ಒಂದು ದಿನ ತಮ್ಮ ಮನೆಗೆ 'ಟೀ'ಗೆ ಬರಬೇಕೆಂದು ಅವನನ್ನು ಆಹ್ವಾನಿಸಿಯೂ ಬಿಟ್ಟಳು.

ಪರೀಕ್ಷೆಯೂ ಮುಗಿಯಿತು. ಸುಂದರಂನನ್ನು 'ಟೀ'ಗೆ ಆಹ್ವಾನಿಸಿದ್ದು ದಾಗಿ ನಿರ್ಮಲೆ ತಂದೆಗೆ ತಿಳಿಸಿದಳು. ಮಗಳ ಎಲ್ಲ ಇಷ್ಟಗಳನ್ನೂ ಸಲ್ಲಿಸುತ್ತಿದ್ದ ಅವರು ಬೇಡವೆನ್ನಲಿಲ್ಲ. ಮಗಳ ಮನಸ್ಸಿನಲ್ಲಿದ್ದ ನಿಜವಾದ ಉದ್ದೇಶ ಮಾತ್ರ ಅವರಿಗೆ ಗೊತ್ತಾಗಿರಲಿಲ್ಲ, ಅಷ್ಟೆ.

'ಟೀ' ಸಮಾರಂಭದ ದಿನವೂ ಬಂದಿತು. ನಿರ್ಮಲೆ ತನ್ನ ನಚ್ಚಿನ ಇಬ್ಬರು ಗೆಳತಿಯರನ್ನೂ ಕರೆದಿದ್ದಳು. ಆಗ ವಿನೋದದ ಮಾತುಕತೆ ಹೊರತು ಹೆಚ್ಚಿನ ಮಾತುಕತೆಗೆ ಅವಕಾಶವಾಗಲಿಲ್ಲ. ಏಕಾಂತದ ಮಾತುಕತೆಗಾಗಿ ಬೇರೊಂದು ಗೊತ್ತು ಪಾಡು ಮಾಡಿಕೊಳ್ಳುವಷ್ಟು ಕೆಚ್ಚು ಕುದುರಲಿಲ್ಲ ನಿರ್ಮಲೆಯಲ್ಲಿ ಸುಂದರಂ ನಡತೆವಂತನಾದ, ಬುದ್ಧಿವಂತನಾದ ಯುವಕನಾಗಿ ಕಂಡುಬಂದ ನಂಜುಂಡಯ್ಯನವರಿಗೆ.

ಸುಂದರಂ ಹೊರಟುಹೋದ ಸ್ವಲ್ಪ ಹೊತ್ತಿನ ಮೇಲೆ ನಿರ್ಮಲೆ ಲಜ್ಜಾಭರದಿಂದ ಬಾಗಿ ತಂದೆಯ ಮುಂದೆ ನಿಂತಳು. ಅವರು ಏನೆಂದು ಕೇಳಿದಾಗ ಅವಳು ಧೈರ್ಯಮಾಡಿ ತನ್ನ ಮನಸ್ಸನ್ನು ಬಿಚ್ಚಿ ಹೇಳಿದಳು. ಅವರಿಗೆ ಗಾಬರಿಯಾಯಿತು.

"ಕುಲ ಗೋತ್ರ ವಿಚಾರಿಸದೆ ಅವನನ್ನು ಮದುವೆಯಾಗುವುದೆಂದರೇನು?" ಎಂದು ಕೇಳಿದರವರು.

"ಒಲಿದ ಮೇಲೆ ಕುಲವೇನು ಗೋತ್ರವೇನು?" ಎಂದು ತಾನು ಸಿನಿಮಾ ಚಿತ್ರಗಳಿಂದ, ಕಥೆ ಕಾದಂಬರಿಗಳಿಂದ ಕಲಿತಿದ್ದ ಪಾಠವನ್ನು ನಿರ್ಮಲೆ ತಂದೆಗೆ ಒಪ್ಪಿಸಿದಳು.

ವಿನೋದ ಕಾಲಹರಣಗಳಿಗೆಂದು ಮಗಳನ್ನು ಸಿನಿಮಾಗಳಿಗೆ ಅವರು ಕರೆದುಕೊಂಡು ಹೋಗುತ್ತಿದ್ದರೇ ಹೊರತು, ಈ ಬಗೆಯ ಪಾಠ ಕಲಿತು ಕೊಳ್ಳುತ್ತಾಳೆಂದು ಸಂಪ್ರದಾಯನಿಷ್ಠರಾದ ಅವರು ನಿರೀಕ್ಷಿಸಿರಲಿಲ್ಲ. ಅವರಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ರಾತ್ರಿಯೆಲ್ಲ ಯೋಚನೆ ಮಾಡಿ—"ಸುಂದರಂ ಯಾರು ಎತ್ತ ಎಂದು ವಿಚಾರಿಸುತ್ತೇನೆ. ನಮ್ಮ 'ಜಾತಿ'ಯವನಾಗಿದ್ದರೆ ಮುಂದಿನ ಏರ್ಪಾಡು ಮಾಡೋಣ. ನಮ್ಮ ಪಂಗಡ ದವನಲ್ಲದಿದ್ದರೂ ನಮ್ಮ ಜಾತಿಯವನಾದರೆ ಸಾಕು" ಎಂದು ಮಗಳಿಗೆ ಸಮಾಧಾನ ಹೇಳಿದರು. ಅವರಿಗೆ ಒಂದು ಕಡೆ–ಮಗಳ ಯೋಚನೆ ಸರಿಯಲ್ಲ ವೆಂಬ ವಿಚಾರ, ಅವಳ ಇಷ್ಟದಂತೆ ನಡೆದುಕೊಂಡರೆ ಸಮಾಜದಲ್ಲಿ, ಅದರಲ್ಲೂ ತಮ್ಮ ಪಂಗಡದವರಲ್ಲಿ, ತಮ್ಮ ಪ್ರತಿಷ್ಠೆಗೆ ಕುಂದು ಎಂಬ ಭಾವನೆ; ಇನ್ನೊಂದು ಕಡೆ–ಇಷ್ಟು ದಿನವೂ ಅವಳ ಕೋರಿಕೆಯೆಲ್ಲವನ್ನೂ ನಡಸಿಕೊಟ್ಟು ಈಗ ಅವಳ ಈ ಕೋರಿಕೆಯನ್ನು ನಿರಾಕರಿಸಿ ಅವಳ ಮನಸ್ಸು ನೋಯಿಸುವುದು ಹೇಗೆ ಎಂಬ ವಾತ್ಸಲ್ಯದ ಮರುಕ. ಈ ಇಬ್ಬಗೆಯಲ್ಲಿ ಸಿಲುಕಿ ತೊಳಲುತ್ತಿದ್ದರವರು. ತಂದೆಯ ಮಾತುಗಳು ಅತೃಪ್ತಿಕರವಲ್ಲ ದಿದ್ದರೂ, ನಿರ್ಮಲೆ ಮಾತ್ರ, ಕಾವ್ಯದ ಮಾತಿನಲ್ಲಿ ಹೇಳುವುದಾದರೆ, ಕಾಮ ಜ್ವರಪೀಡಿತಳಾಗಿಹೋಗಿದ್ದಳು! 'ಸುಂದರಂ ನಮ್ಮ ಜಾತಿಯವನಾಗಿ ಇರದಿದ್ದರೆ?'....

ನಂಜುಂಡಯ್ಯನವರು ಸದುದ್ದೇಶದಿಂದಲೇ ಸುಂದರಂನ ಬಗ್ಗೆ ವಿಚಾರಿಸಲು ಮೊದಲುಮಾಡಿದ್ದರು; ಎಲ್ಲವೂ ಕೂಡಿಬಂದರೆ ಸುಂದರಮ್‌ಗೆ ನಿರ್ಮಲೆಯನ್ನು ಕೊಡುವುದಾಗಿಯೂ ನಿಶ್ಚಯ ಮಾಡಿಬಿಟ್ಟಿದ್ದರು. ಸುಂದರಂನ ಗೆಳೆಯರು, ಕಾಲೇಜಿನ ಕಚೇರಿಯ ಗುಮಾಸ್ತರು, ತಮಗೆ ತಿಳಿದಿದ್ದ ಅವನ ಒಬ್ಬಿಬ್ಬರು ಅಧ್ಯಾಪಕರು–ಇವರೆಲ್ಲರಲ್ಲಿಯೂ ಸುಂದರಂನ ವಿಷಯವಾಗಿ ವಿಚಾರಿಸಿದರು. ಮೊತ್ತಮೊದಲನೆಯದಾಗಿ, ಸುಂದರಂ ದೇಶೀಯ ಕ್ರೈಸ್ತನೆಂದು ತಿಳಿದು ಬಂತು. ಇನ್ನು ಅವನ ನಡತೆ, ಬುದ್ಧಿ

ಇವನ್ನೆಲ್ಲಾ ಕಟ್ಟಿಕೊಂಡೇನು? ಹೋಗಲಿ, ನಡತೆಯಾದರೂ ಸಮರ್ಪಕವೇ ಎಂದರೆ, ಆ ವಿಚಾರವಾಗಿ ಯಾರಿಂದಲೂ ಅಷ್ಟು ಒಳ್ಳೆಯ ಅಭಿಪ್ರಾಯ ಹೊರಡಲಿಲ್ಲ. ಸಾಲದ್ದಕ್ಕೆ, ಮಿಷನರಿಗಳ ಧರ್ಮನಿಧಿಯ ಸಹಾಯದಿಂದ ಓದುತ್ತಿದ್ದನವನು. ಅವನ ತಂದೆ ಯಾರೋ, ತಾಯಿ ಯಾರೋ–ಅದು ರಹಸ್ಯದ ವಿಚಾರವಾಗಿತ್ತು. ಈ ಸಂಗತಿಗಳ ಬೆಳಕಿನಲ್ಲಿ, ಮಗಳು ಹಿಡಿದ ದಾರಿ ಸರಿಕಾಣಲಿಲ್ಲ. ಅವಳ ಹಿತಸಂರಕ್ಷಣೆ ತಮ್ಮ ಕರ್ತವ್ಯ ಅವಳ ಮನಸ್ಸಿಗೆ ಹಿತವಾಗದಿದ್ದರೂ ಬಾಳಿಗೆ ಹಿತವಾಗುವಂತೆ ಮಾಡಲು ತಮ್ಮ ಅಧಿಕಾರವನ್ನು ಚಲಾಯಿಸಬೇಕು. ಅವಶ್ಯವಾದರೆ ಅವಳಿಗೆ ಕಠಿನವಾಗಿಯೇ ಬುದ್ಧಿ ಹೇಳಬೇಕು–ಎಂದು ತೀರ್ಮಾನಮಾಡಿಕೊಂಡರು.

ಈ ಕಾರ್ಯಕ್ರಮದ ಮೊದಲ ಅಂಗವಾಗಿ, ನಂಜುಂಡಯ್ಯನವರು ಬಹು ದಿನಗಳವರೆಗೆ ಈ ವಿಚಾರವಾಗಿ ನಿರ್ಮಲೆಯೊಡನೆ ಮಾತನಾಡಲಿಲ್ಲ. ಅವಳೂ ಸ್ವಲ್ಪ ಅಸಮಾಧಾನಗೊಂಡೇ ಇದ್ದಳು. ಈ ಮಧ್ಯೆ ಪರೀಕ್ಷೆಯ ಫಲಿತಾಂಶ ಹೊರಬಿತ್ತು. ನಿರ್ಮಲೆಗೆ ಮೊದಲ ತರಗತಿಯಲ್ಲಿ ಪ್ಯಾಸಾಗಿತ್ತು; ಇದರಿಂದ ಅವಳಿಗೆ ಅತ್ಯಂತ ಹರ್ಷವಾಯಿತು; ಆದರೆ ಸುಂದರಮ್‌ಗೆ ಏನಾಯಿತೋ ಎಂದು ಅವಳ ಆತಂಕ. ಅವನಿಗೆ ಫೇಲಾಗಿದೆಯೆಂಬುದನ್ನು ನಂಜುಂಡಯ್ಯನವರು ತಿಳಿದುಕೊಂಡಿದ್ದರು; ಇದರಿಂದ ಅವರಿಗೆ ಸಂತೋಷವಾಗಿತ್ತು! ಮಗಳಿಗೆ ಬುದ್ಧಿ ಹೇಳಲು ಸಕಾಲವೆಂದು ಭಾವಿಸಿ, ಒಂದು ದಿನ ಅವಳು ಹರ್ಷಚಿತ್ತಳಾಗಿದ್ದ ಸಂದರ್ಭದಲ್ಲಿ, ಅವಳಿಗೆ ಮೃದುವಾಗಿಯೇ ಹೇಳಿದರು. (ಕಠಿನವಾಗಿ ಬುದ್ಧಿ ಹೇಳಬೇಕೆಂದಿದ್ದ ಅವರ ತೀರ್ಮಾನ, ಮಗಳ ಮುಂದೆ ಕುಳಿತಾಗ ಸಡಿಲವಾಗಿಹೋಯಿತು!)

"ಗೌರೂ" (ಅವರು ಗೌರೂ ಎಂದೇ ಕೂಗುತ್ತಿದ್ದರು; ಅವಳ ಹೆಸರಿನ ಬದಲಾವಣೆ ಹೊರಗಿನ ಪ್ರಪಂಚದಷ್ಟಕ್ಕೆ ಮಾತ್ರ ಪರಿಮಿತವಾಗಿತ್ತು), "ಗೌರೂ, ನನ್ನ ಮಾತು ಕೇಳು....ಸುಂದರಂ ನಿನ್ನ ಕೈ ಹಿಡಿಯಲು ಸರ್ವಥಾ ಅಯೋಗ್ಯ. ಜಾತಿಯ ಮಾತು ಹಾಗಿರಲಿ" ಎಂದು ಅವನ ವಿಚಾರವಾಗಿ ತಾವು ಸಂಗ್ರಹಿಸಿದ್ದ ಸಂಗತಿಗಳನ್ನೂ, ಅವನಿಗೆ ಫೇಲಾಗಿದ್ದುದನ್ನೂ ಮಗಳಿಗೆ ತಿಳಿಸಿ, "ನೀನಿನ್ನೂ ಹುಡುಗಿ. ನಿನಗೆ ತಿಳಿಯದು. ಮೇಲುನೋಟಕ್ಕೆ ಮೋಸ ಹೋಗಿ ಮುಂದಿನ ಬಾಳಿಗೆ ಹುಳಿ ಹಿಂಡಿಕೊಳ್ಳ

ಬಹುದೇನಮ್ಮ? ನೋಡುವುದಕ್ಕೆ ಅವನಿಗಿಂತ ಚೆನ್ನಾಗಿರುವವನಿಗೇ ಕೊಟ್ಟು ಮದುವೆ ಮಾಡುತ್ತೇನೆ. ಸುಂದರಂನ ಯೋಚನೆ ಬಿಟ್ಟುಬಿಡು. ಸಿನಿಮಾದಲ್ಲಿ ಬೇಕಾದರೆ ನಿನ್ನಂಥವಳು ಸುಂದರಂನಂಥ ಹುಡುಗನನ್ನು ಮದುವೆಯಾಗಬಹುದು. ಸಿನಿಮಾದ ಕಥೆಯನ್ನು ಹೇಗೆಂದರೆ ಹಾಗೆ ತಿರುಗಿಸುವುದು ಕಥೆ ಬರೆಯುವವನ ಕೈಯಲ್ಲಿದೆ, ನಿರ್ದೇಶಕನ ಕೈಯಲ್ಲಿದೆ; ಅಲ್ಲಿ ಸುಂದರಂ ಹುಡುಗತನದ ಕೆಟ್ಟ ಚಾಳಿಗಳನ್ನೆಲ್ಲಾ ಬಿಟ್ಟು ನಿರ್ಮಲೆಗೆ ಯೋಗ್ಯನಾದ ಪತಿಯಾಗುವಂತೆ, ಮಹಾ ಪರಿವರ್ತನೆಯಾಗುವಂತೆ ಚಿತ್ರನಿರ್ಮಾಪಕ ಯೋಜನೆ ಮಾಡುತ್ತಾನೆ. ನಾವು ನೋಡಿ ಸಂತೋಷಪಡುತ್ತೇವೆ, ತೃಪ್ತಿಪಡುತ್ತೇವೆ. ಪ್ರಪಂಚ ಹೀಗಾಗಬಾರದೇ ಎಂದುಕೊಳ್ಳುತ್ತೇವೆ. ಆದರೆ ವಾಸ್ತವ ಪ್ರಪಂಚ ಸಿನಿಮಾದ ಪ್ರಪಂಚದ ಹಾಗಿಲ್ಲ, ಗೌರು. ಜೀವನ ಚಿತ್ರದ ನಿರ್ದೇಶಕನಾದ ವಿಧಿಗೆ ಕಲಾದೃಷ್ಟಿಯಿಲ್ಲ; ನಮ್ಮ ಎಚ್ಚರಿಕೆ ತಪ್ಪಿದರೆ, ಹರ್ಷಾಂತವಾಗಬೇಕಾದ ಚಿತ್ರ ದುರಂತವಾಗಿಬಿಡುತ್ತದೆ, ವಿಧಿಯ ಅಟ್ಟಹಾಸ ಪ್ರಬಲವಾಗಿಬಿಡುತ್ತದೆ....ಆದ್ದರಿಂದ, ಸುಂದರಂನ ಯೋಚನೆ ಬಿಟ್ಟುಬಿಡು. ಅವನು ತನ್ನನ್ನು ತಾನು ತಿದ್ದಿಕೊಳ್ಳುತ್ತಾನೆಂಬ ನೆಚ್ಚಿಕೆ-ನನಗೆ ಇಲ್ಲ" ಎಂದು ಮುಗಿಸಿದರು.

ನಿರ್ಮಲೆ ಮೌನವಾಗಿದ್ದಳು. ತಂದೆಯ ಮಾತು ಕೇಳಿ ಮಗಳ ಮೌನ ಸಮ್ಮತಿ ಸೂಚಕವೆಂದು ಅವರಿಗೆ ತುಂಬ ಆನಂದವಾಯಿತು.

* * * * *

ನಿರ್ಮಲೆಗೆ ಮದುವೆಯಾಗಿ, ಈಗ ಒಂದು ಹೆಣ್ಣು ಮಗುವಿದೆ. ಆ ಮಗುವಿನಲ್ಲಿ ಅವಳ ಜೀವ, ಅವಳ ಸಂಸಾರ ಅವಳಿಗೆ ಈಗ ಆನಂದ ಸಾಮ್ರಾಜ್ಯ. ಆದರೆ, ಇನ್ನೂ ಸಿನಿಮಾ ನೋಡುವ ಹುಚ್ಚು ಮಾತ್ರ ಅವಳನ್ನು ಬಿಟ್ಟಿಲ್ಲ. ಮಗುವಿಗೆ ಯಾವುದಾದರೂ ಸಿನಿಮಾ ತಾರೆಯ ಹೆಸರಿಡಬೇಕೆಂದು ನಿರ್ಮಲೆಯ ಹುಚ್ಚೆಂಬುದನ್ನು ಅವಳ ಗಂಡ ಮಾಧವ ಅರಿತು, ಹೆಂಡತಿಯನ್ನು ಕೀಟಲೆ ಮಾಡುವುದಕ್ಕಾಗಿ ಒಂದೊಂದಾಗಿ ಹೆಸರು ಸೂಚಿಸಿಕೊಂಡು ಬಂದ:

"ಗೋಹರ್?"

"ಥೂ; ಚೆನ್ನಾಗಿಲ್ಲ."

"ಕನನ್‌ಬಾಲ ?"

"ಅವಳು ಬಹು ಚೆನ್ನಾಗಿ ಹಾಡುತ್ತಾಳೆ. ಹೆಸರು ಚೆನ್ನಾಗಿಲ್ಲ; ಕೋಣನಬಾಲ ಎಂದ ಹಾಗೆ."

"ಶಾಂತಾ ಆಪ್ಟೆ ?"

"ಆಪ್ಟೆ ಯಾಕೆ ? ಶಾಂತ ಅಷ್ಟೆ ಸಾಲದೆ ? ಆದರೆ ಅವಳ ಅಭಿನಯದಲ್ಲಿ ಶಾಂತಿ ಸಮಾಧಾನ ಸಾಲದು. ಅವಳ ಹೆಸರು ಬೇಡ."

"ಜಮುನಾ?"

"ಬಂಗಾಳಿಯಾಯಿತು. ಇಟ್ಟರೆ ಯಮುನಾ ಎಂದು ಇಡ ಬೇಕಾಗುತ್ತೆ."

"ಮೆಹತಾಬ್....?" "ದೇವಿಕಾರಾಣಿ....?" "ಲೀಲಾಚಿಟ್ನೀಸ್....?"

"ಏನು! ನಮ್ಮ ಎಳ ಮಗುವಿಗೆ ಮುದುಕಿಯರ ಹೆಸರೆ ?!"

"ವಾಸಂತಿ ?"

"ವಾಸಂತಿ ಇನ್ನೂ ತಾರೆಯಾಗಿಲ್ಲ. ಆದರೆ....ಆಗಬಹುದು....ಚೆನ್ನಾಗಿದೆ. ವಾಸಂತಿ ಎಂದೇ ಕರೆಯೋಣ....ನಾನಂತೂ ಸಿನಿಮಾ ನಟಿಯಾಗುವ ಅವಕಾಶವಾಗಲಿಲ್ಲ ಈ ಹಾಳು ಸಮಾಜದಲ್ಲಿ. ನಮ್ಮ 'ವಾಸಂತಿ'ಯಾದರೂ ಆಗಲಿ. ಅವಳು ಅಭಿನಯಿಸುವ ಚಿತ್ರವನ್ನಾದರೂ ನೋಡಿ ಸಂತೋಷ ಪಡುತ್ತೇನೆ."

ಮಾಧವನಿಗೆ ಒಂದು ಮಹಾ ಸ್ಫೂರ್ತಿಯಾಯಿತು! 'ವಾಸಂತಿ ಚೆನ್ನಾಗಿದೆ. ಆದರೆ, ನಮ್ಮ ಮಗು ಸಿನಿಮಾ ನಟಿಯಾದರೆ ಹೆಸರಿನಲ್ಲಿ ವೈಶಿಷ್ಟ್ಯವೇ ಇರುವುದಿಲ್ಲ. ಸ್ವಲ್ಪ ಮಾರ್ಪಾಡುಮಾಡಿ 'ವಸಂತಾ' ಎನ್ನ ಬಾರದೇಕೆ ?"

ನಿರ್ಮಲೆ ಕೊಂಚ ಯೋಚಿಸಿದಳು ; ಆಗಲಿ ಎಂದು ಒಪ್ಪಿದಳು.

ವಸಂತೆಗೆ ಆರು ತಿಂಗಳು ತುಂಬುವುದಕ್ಕಿಲ್ಲ, ನಿರ್ಮಲೆ ಮಗು ಕರೆದು ಕೊಂಡೇ ಗಂಡನೊಡನೆ ಸಿನಿಮಾಕ್ಕೆ ಹೋಗಲು ಮೊದಲುಮಾಡಿಬಿಟ್ಟಳು! ಅವಳ ಸಂತೋಷ ಮಾಧವನ ಸಂತೋಷವಾಗಿತ್ತು.

* * * * *

ಮಾಧವನ ಗೆಳೆಯ ಒಬ್ಬ ಹೊಸದಾಗಿ ಚಲನಚಿತ್ರ ಸಂಬಂಧವಾದ ಕನ್ನಡ ಪತ್ರಿಕೆ ಹೊರಡಿಸಿದ್ದ. ಸ್ವತಃ ನಿಷ್ಪಕ್ಷಪಾತವಾದ ವಿಮರ್ಶೆಗಳನ್ನು ಮಾಡಿದರೆ ಸಿನಿಮಾ ಪ್ರಕಟನೆಗಳು ತಪ್ಪಿಹೋಗುವುವೆಂಬ ಶಂಕೆಯಿಂದ ಆಗಿಂದಾಗ್ಗೆ 'ಪ್ರೇಕ್ಷಕರ ಚಿತ್ರ ಪರಾಮರ್ಶೆ' ಪ್ರಕಟಿಸುವ ಹೊಸ ಯೋಜನೆಯೊಂದನ್ನು ಪ್ರಾರಂಭಿಸಿದ್ದ. ಆದರೆ ಅವನಿಗೆ ಸರಿಯಾಗಿ ಬರೆಯುವವರು ದೊರಕಿರಲಿಲ್ಲ. ಬರೆಯುವವರೆಲ್ಲ ಅತಿ ಹೊಗಳುತ್ತಿದ್ದರು, ಇಲ್ಲವೆ ಮಿತಿಯಿಲ್ಲದೆ ತೆಗಳುತ್ತಿದ್ದರು. ಅವನು ಒಮ್ಮೆ ಈ ಬಗ್ಗೆ ಮಾಧವನಲ್ಲಿ ಹೇಳಿಕೊಂಡಾಗ, ಮಾಧವ ಗೆಳೆಯನಿಗೆ ತನ್ನ ಹೆಂಡತಿಯ ಹೆಸರು ಸೂಚಿಸಿದ.

ವಾಸ್ತವ ಜೀವನದ ಅನುಭವ ಪಡೆಯುತ್ತಿರುವ ನಿರ್ಮಲೆ ಈಗ ದೊಡ್ಡ ಸಿನಿಮಾ ಚಿತ್ರಗಳ ವಿಮರ್ಶಕಳಾಗಿ ಪರಿಣಮಿಸಿದ್ದಳು. ಅವಳು ಯಾವ ಚಿತ್ರವನ್ನೂ ಅಷ್ಟಿಷ್ಟಕ್ಕೆ ಒಪ್ಪುತ್ತಿರಲಿಲ್ಲ. ಈಚೆಗೆ, ಒಂದೊಂದರಲ್ಲಿ ಒಂದೊಂದು ಹುಳುಕು ಕಾಣುತ್ತಿದ್ದಳು. ಬಹುಮಟ್ಟಿಗೆ ಎಲ್ಲ ಚಿತ್ರಗಳೂ ವಾಸ್ತವ ಜೀವನವನ್ನು ಚಿತ್ರಿಸುತ್ತಿಲ್ಲವೆಂದು ಅವಳ ವಾದ; ಅವಳು ಹೇಳುವುದೆಲ್ಲವನ್ನೂ ಅಂತರ್ಯದಲ್ಲಿ ಒಪ್ಪುತ್ತಿದ್ದರೂ, ಅವಳು ಹೇಳಿದ್ದಕ್ಕೆಲ್ಲ ಪ್ರತಿವಾದ ಮಾಧವನದು: ಹೆಂಡತಿಯನ್ನು ರೇಗಿಸಿದಷ್ಟೂ ಅವನಿಗೆ ವಿನೋದ! ಚಿತ್ರದ ಹುರುಳನ್ನು ಅನುಭವದ ಒರೆಗಲ್ಲಿಗೆ ಹಚ್ಚಿ ನೋಡುವ ಅವಳ ವಿಮರ್ಶನಶಕ್ತಿ ಕಂಡು ಅವನಿಗೆ ಮೆಚ್ಚು.

ಮಾಧವನ ಸೂಚನೆ ಕೇಳಿ ಆ ಗೆಳೆಯ ಹಿಗ್ಗಿಹೋಗಿ, ಮಾಧವನ ಬೆನ್ನುಹತ್ತಿಯೇ ಬಿಟ್ಟ. 'ಚಿತ್ರಪ್ರಕಾಶ'ದಲ್ಲಿ ನಿರ್ಮಲೆಯ ಚಿತ್ರವಿಮರ್ಶೆಗಳು ಕ್ರಮವಾಗಿ ಬರತೊಡಗಿದವು. ಓದಿದವರೆಲ್ಲರೂ ಅವನ್ನು ಮೆಚ್ಚಿ, ಸಂಪಾದಕನಿಗೆ ಕಾಗದಗಳನ್ನು ಬರೆದರು. 'ಚಿತ್ರಪ್ರಕಾಶ'ದ ಸೂರಾಟವೂ ಜೋರಾಯಿತು. ಮಾಧವನಿಗೂ ತುಂಬ ಸಂತೋಷವಾಯಿತು. ನಿರ್ಮಲೆಯ ಸಿನಿಮಾ ಹುಚ್ಚು ಸಾರ್ಥಕವಾಯಿತಲ್ಲ ಎಂದು.